CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜುಲೈ ೧೪, ೨೦೦೫ (ಆಷಾಢ ೨೩, ಶಕ ವರ್ಷ ೧೯೨೭) | ಸಂಚಿಕೆ ೨೮ |
|---|---|---|


## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಲೋಕೋಪಯೋಗಿ ಸಚಿವಾಲಯ

**ವಿಷಯ:** ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕಿನ ಬೇಗೂರಿನಿಂದ ಕೌಲಂದೆ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ:ರಶಾ: ಮೇಲ್ದರ್ಜೆ:ಗುಂಡ್ಲುಪೇಟೆ:04-05 ದಿನಾಂಕ:19.1.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕಿನ ಬೇಗೂರಿನಿಂದ ಕೌಲಂದೆವರೆಗಿನ ಒಟ್ಟು 15.00 ಕಿ.ಮೀ ಹಳ್ಳಿ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 64 ಸಿಆರ್‌ಎಂ 2005, ಬೆಂಗಳೂರು, ದಿನಾಂಕ: 25ನೇ ಮೇ 2005**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕಿನ ಬೇಗೂರಿನಿಂದ ಕೌಲಂದೆವರೆಗಿನ ಒಟ್ಟು 15.00 ಕಿಮೀ ಹಳ್ಳಿ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 800

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

### URBAN DEVELOPMENT SECRETARIAT

**Sub:** Cauvery Water Supply Scheme Stage-IV, Phase-II Administrative approval for Japan Bank for International Co-operation assisted project-reg.

**Read:**
1. Government Order No.HUD 15 MNI 90 dated 27-7-1994
2. Government Order No.HUD 15 MNI 90dated 20-6-1995
3. Letter No.BWSSB/CH/CE(K)/1316/2004-05 Dt.14-10-2004

**Preamble:-**

In Government Order Dt.27-7-1994 read at(1) above Administrative approval was accorded to Cauvery Water Supply Scheme Stage-IV, Phase-1 at an estimated cost of Rs.490.00 Crores among others.

In Government Order dt.20-6-1995 read at(2) above sanction was accorded for the estimate amounting to Rs.1072-00 crore for execution of the Cauvery Water Supply Scheme, Stage-IV, Phase-I by the Bangalore Water Supply and Sewerage Board with the revised funding pattern.

In the letter dated 14-10-2004, read at (3) above, The Chairman, Bangalore Water Supply & Sewerage Board has stated that the population in the Bangalore Metropolitan area consisting of the core area and surrounding 7 City Municipal Corporation and 1 Town Municipal Council serviced by the BWSSB, is expected to grow from 6 million to 7.3 million by 2011 as per the CDP revised for 2011 by BDA. The per capita supply is expected to slide from the present 105(which is below the norms of 150 LPCD prescribed by Government of India which excludes industrial and unaccounted for water) to 80 LPCD. Therefore, this has necessitated to takeup Stage-IV, Phase-II Scheme in order to meet the growing demand of water supply and sanitary facility to the said areas by way of augmenting an additional 500 MLD of filtered water to the city. Government of Karnataka has allocated 600 cusecs of water towards water supply to Bangalore City from Cauvery source which is equivalent to 1469 MLD. Presently, about 929 MLD of raw water is being drawn for Cauvery Water Supply Scheme Stage-I, II, III, IV Phase-1.

Further, The Chairman, BWSSB has proposed to utilise the balance of 540 MLD of raw water from river Cauvery near Shivanasamudra and treating it for potable use by constructing a treatment plant of 500 MLD at Thorekadanahalli and pumping it through 3 stages to Bangalore City, and distributing it to various ground level reservoirs in the City.

The estimated cost of Cauvery Water Supply Scheme Stage-IV, Phase-II Scheme is Rs.3384-00 crores. The period of Scheme is from 2005-2006 to 2011-2012. The funding pattern of the Scheme is as follows:-

| | | | |
|---|---|---|---|
| 1) | JBIC | Rs.2830.70 crores(including interest during construction period of Rs.119-00 crores) | Terms of J.B.I.C. Loan are as follows:<br>d. Period of repayment is 30 years including 10years moratorium<br>e. Rate of interest at 1.4% for water supply component and 0.75% for sewerage component<br>f. Land Acquisition Administration expenses, taxes and duties are not eligible for loan |
| 2) | Government of Karnataka | Rs.276.50 Crores | - |
| 3) | Bangalore Water Supply & Sewerage Board | Rs.276.50 Crores | - |
| | **Total -** | **Rs. 3,383.70Crores** | |

The J.B.I.C.has also confirmed to extend its assistance to Phase-II of the CWSS Stage-IV as per the funding pattern indicated above. In this connection Minutes of Discussion(MOD) has already been signed by the members of the JBIC Appraisal Team, Chairman, BWSSB and Director, Minister of Urban Development and Poverty Alleviation, Government of India on 30-9-2004. Further, The State level Co-ordination Committee has also cleared the proposal in its Meeting held on 18-4-2005 subject to certain suggestions. Government has examined the proposal of the BWSSB., keeping in view of the suggestions made by the Committee. Hence the following order.

**Government Order No. UDD 192 MNI 2004, Bangalore, Dated: 8th June 2005**

In the circumstances explained in the Preamble, administrative approval is hereby accorded for the Bangalore Water Supply & Sewerage Board to take up the Cauvery Water Supply Scheme Stage-IV, Phase-II at an estimated cost of Rs.3,383.70 crores( Three thousand three hundred eighty three point seventy crores) with the financial assistance of Japan Bank for International Co-operation, (JBIC), Government of Japan and to provide Budgetory support of Rs.276.50crores during the period of 2005-06 to 2011-12 from Government of Karnataka, apart from reimbursement component of Rs.2830.70 crores from JBIC., with the funding pattern as mentioned in the preamble, with the following conditions:-

1. The State share of Rs.276.50 crores is to be met within the allocations to Urban Development Department and no additional budget provision should be asked.
2. The BWSSB shall bear its share of Rs.276.50 crores from its own resources.

3. The BWSSB shall recover the capital expenditure on this project along with the interest and operation and maintenance charges from the beneficiaries of the project by revising the water tariffs appropriately. Absence of explicit capital cost recovery will result in rural consumers subsidising an urban project which specifically benefits Bangalore. To enable capital cost recovery BWSSB may operationalise an ESCROW arrangement for the State Government to draw funds for repayment of the loan.
4. To enable debt servicing the Board shall repay to the State Government of the Loan Portion and the interest payable to Government of India/JBIC., BWSSB will have to enter into Memorandum of Understanding with the State Government to that effect.
5. No additional posts shall be created for the implementation of the project.
6. The project should be posed to JBIC through the Line Ministry of Government of India and department of Economic Affairs, Ministry of Finance, Government of India.
7. Request may also be made to Government of India to consider passing this external assistance to the State on back to back basis.
8. A Project Steering Committee/Empowered Committee shall be constituted to oversee the timely implementation with Secretary(Expenditure) Secretary (B&R) as one of the members of the Committee.

This order issues with the concurrence of Finance Department vide U.O.Note No.FD 761 (exp.-9)05 dated.11-2-2005.

By Order and in the name of Governor of Karnataka

**V.R. ILKAL**

P.R. 799

Under Secretary to Government,

Urban Development Department.

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ತಿದ್ದುಪಡಿ ಆದೇಶ ಸಂಖ್ಯೆ: ಪಸಂಮೀ 141 ಮೀಇಸೇ 2003, ಬೆಂಗಳೂರು, ದಿನಾಂಕ: 28ನೇ ಮೇ 2005**

ಸರ್ಕಾರಿ ಅಧಿಕೃತ ಜ್ಞಾಪನ ಸಂಖ್ಯೆ:ಪಸಂಮೀ/147/ಮೀಇಸೇ/99 ದಿನಾಂಕ: 27.9.2001ರಲ್ಲಿ ಮೀನುಗಾರಿಕೆ ಇಲಾಖೆಯಲ್ಲಿನ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದಕ್ಕೆ ಸೇರಿದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:26.7.1992 ರಿಂದ 31.12.2000 ರವರೆಗಿನ ಅವಧಿಗೆ ಪ್ರಕಟಪಡಿಸಲಾಗಿದೆ. ಸದರಿ ಅಧಿಕೃತ ಜ್ಞಾಪನದ ಅನುಬಂಧ-2 ರಲ್ಲಿನ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಡಿ. ತಿಪ್ಪೇಸ್ವಾಮಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1), ರವರ ಹೆಸರನ್ನು ಕ್ರಮ ಸಂಖ್ಯೆ 137 ರಲ್ಲಿರುವ ಶ್ರೀ ಟಿ.ಕೆ. ಲೋಕನಾಥ್ ಮತ್ತು ಕ್ರಮ ಸಂಖ್ಯೆ 138 ರಲ್ಲಿರುವ ಶ್ರೀ ಶ್ರೀನಿವಾಸರೆಡ್ಡಿ ಇವರ ಹೆಸರುಗಳ ಮಧ್ಯಂತರದಲ್ಲಿ ಕ್ರಮ ಸಂಖ್ಯೆ 137-ಎ ಎಂದು ಸೇರ್ಪಡಿಸಿಕೊಂಡು ತಿದ್ದಿ ಓದಿಕೊಳ್ಳತಕ್ಕದ್ದು. ಮತ್ತು ಸದರಿ ಅನುಬಂಧದ ಕಾಲಂ (8) ರಲ್ಲಿ ಶ್ರೀ ಡಿ. ತಿಪ್ಪೇಸ್ವಾಮಿ ರವರ ನೇಮಕಾತಿಗೆ/ಜೇಷ್ಠತೆಗೆ ದಿನಾಂಕ:30.5.1995ನ್ನು ನೈಜವಾದ ಅರ್ಹತಾ ದಿನಾಂಕವೆಂದು ಹಾಗೂ ದಿನಾಂಕ:4.9.2001ನ್ನು ನಿಜವಾಗಿ ಮುಂಬಡ್ತಿ ಹೊಂದಿದ ದಿನಾಂಕವೆಂದು ಸೇರ್ಪಡಿಸಿಕೊಂಡು ತಿದ್ದಿ ಓದಿಕೊಳ್ಳತಕ್ಕದ್ದು.

ಸದರಿಯವರ ವೇತನವನ್ನು ಮೇಲಿನ ಅರ್ಹತಾ ದಿನಾಂಕದಿಂದ ಕಾಲ್ಪನಿಕವಾಗಿ ನಿಗದಿಪಡಿಸಿ ಆರ್ಥಿಕ ಲಾಭವನ್ನು ಅವರು ವಾಸ್ತವಿಕವಾಗಿ ಬಡ್ತಿ ಹೊಂದಿದ ದಿನಾಂಕ:4.9.2001 ರಿಂದ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ಕಮಲಕುಮಾರ್**

ಪಿ.ಆರ್. 801

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಕೆ.ಪಿ. ಸಿದ್ದಪ್ಪ, ನಿವೃತ್ತ ಸಮೂಹ ಎ ಅಧಿಕಾರಿಗಳು ಹಾಗೂ ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿ, ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಾಲಯ ಇವರ ಮೇಲೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:** 1. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂ.ಸಿಬ್ಬಂದಿ/3/ಸಿಆರ್/13/2000-2001 ದಿನಾಂಕ: 13.5.2003.

2. ಸರ್ಕಾರದ ಆದೇಶ ಸಂಖ್ಯೆ: ಕಂಇ 116 ಮುಸೇವಿ 2001 ದಿ:29.7.2003.

**ಪ್ರಸ್ತಾವನೆ:**

ಶ್ರೀ ಕೆ.ಪಿ. ಸಿದ್ದಪ್ಪ, ಸಮೂಹ ಎ (ಕಿರಿಯ ಶ್ರೇಣಿ) ನಿವೃತ್ತ ಅಧಿಕಾರಿ ಇವರು ದಿ:23.9.1998 ರಿಂದ 3.7.2000 ರವರೆಗೆ ನಂಜನಗೂಡಿನ ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನದ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸಿದ ಅವಧಿಯಲ್ಲಿ ಸದರಿ ದೇವಾಲಯಕ್ಕೆ ಸೇರಿದ ಶ್ರೀ ಪ್ರಸನ್ನ ಚಿಂತಾಮಣಿ ಗಣಪತಿ ದೇವಾಲಯದ ಕಟ್ಟಿನ ಗಾಲಿ ದುರಸ್ಥಿಗಾಗಿ ಒಂದು ಪ್ರಕಟಣೆ ನೀಡಿ, ಒಂದೇ ಕೆಲಸವನ್ನು ಹತ್ತು ತುಂಡು ಕೆಲಸಗಳನ್ನಾಗಿ ವಿಭಜಿಸಿ, ಹತ್ತು ಕೊಟೇಷನ್‌ಗಳನ್ನು ಅಂಗೀಕರಿಸಿ, ತಲಾ ರೂ. 10,000-00 ಗಳಂತೆ ಒಟ್ಟು ರೂ.1,00,000-00 ಲಕ್ಷ ದೇವಾಲಯದ ಹಣವನ್ನು ಮೇಲಾಧಿಕಾರಿಗಳ ಮಂಜೂರಾತಿ ಪಡೆಯದೇ ಕಟ್ಟಿನ ಗಾಲಿ ರಿಪೇರಿಗೆ ಪಾವತಿಸಿ, ಅಧಿಕಾರ ದುರುಪಯೋಗಪಡಿಸಿಕೊಂಡಿರುವ ಆರೋಪದ ಬಗ್ಗೆ ಸದರಿಯವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1957ರ ನಿಯಮ 214ರಡಿ ಇಲಾಖಾ ವಿಚಾರಣೆ ಪ್ರಾರಂಭಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ:(2)ರ ದಿನಾಂಕ:29.7.2003ರ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ.

ಶ್ರೀ ಕೆ.ಪಿ. ಸಿದ್ದಪ್ಪ ರವರ ಮೇಲಿನ ಆರೋಪದ ಬಗ್ಗೆ ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿ:13.5.2003ರ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಆರೋಪಣಾ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸರ್ಕಾರವು ಈ ಆರೋಪಣಾ ಪಟ್ಟಿಯನ್ನು ಶ್ರೀ ಕೆ.ಪಿ. ಸಿದ್ದಪ್ಪರವರಿಗೆ ಕಳುಹಿಸಿ, ಅವರ ಸಮಜಾಯಿಸಿ ಹೇಳಿಕೆಯನ್ನು ಕೇಳಲಾಗಿ ಮೇಲೆ ಕ್ರಮ ಸಂಖ್ಯೆ:(3)ರಲ್ಲಿ ಓದಲಾದ ದಿ:22.9.2003ರ ಪತ್ರದಲ್ಲಿ ಕಾಲಾವಕಾಶ ನೀಡುವಂತೆ ಸದರಿಯವರು ಕೋರಿದಂತೆ ಸರ್ಕಾರವು ದಿ:7.10.2003ರ ಪತ್ರದಲ್ಲಿ 15 ದಿನಗಳವರೆಗೆ ಕಾಲಾವಕಾಶ ನೀಡಲಾಗಿತ್ತು.

ಶ್ರೀ ಕೆ.ಪಿ. ಸಿದ್ದಪ್ಪ ರವರು ಮೇಲೆ ಕ್ರಮ ಸಂಖ್ಯೆ:(3)ರಲ್ಲಿ ಓದಲಾದ ಪತ್ರ ದಿ:6.10.2003ರಂದು ಸಲ್ಲಿಸಿರುವ ಸಮಜಾಯಿಸಿ ಹೇಳಿಕೆಯಲ್ಲಿ ಅವರ ಮೇಲಿನ ಆಪಾದನೆಗಳನ್ನು ಅಲ್ಲಗೆಳೆದಿದ್ದಾರೆ. ಅವರ ಸಮಜಾಯಿಸಿ ಹೇಳಿಕೆಯನ್ನು ಪರಿಶೀಲಿಸಲಾಗಿ ಅವು ಸಮರ್ಪಕವಾಗಿರದೇ ಇರುವುದು ಹಾಗೂ ನಿಯಮ ಉಲ್ಲಂಘನೆ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿದೆ. ಆದ್ದರಿಂದ ಈ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ಈ ಆರೋಪಿ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 20 ಮುಸೇವಿ 2003, ಬೆಂಗಳೂರು, ದಿನಾಂಕ: 18ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರಡಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ಕೆ.ಪಿ. ಸಿದ್ದಪ್ಪ, ಸಮೂಹ ಎ (ಕಿರಿಯ ಶ್ರೇಣಿ) ಅಧಿಕಾರಿ (ನಿವೃತ್ತ) ಹಾಗೂ ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿಗಳು, ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನ, ನಂಜನಗೂಡು, ಇವರ ವಿರುದ್ಧ ಮಾಡಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಇಂಧುದರ, ನಿವೃತ್ತ, ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ನಂ.8,15ನೇ ಕ್ರಾಸ್, ನೂರು ಅಡಿ ರಿಂಗ್ ರಸ್ತೆ, 5ನೇ ಫೇಸ್, ಜೆ.ಪಿ. ನಗರ, ಬೆಂಗಳೂರು-78 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಶಿಸ್ತು ಪ್ರಾಧಿಕಾರಿಯವರ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(5)(c) ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಕಛೇರಿ ಸಹಾಯಕರು-1, ಧಾರ್ಮಿಕ ದತ್ತಿ ಆಯುಕ್ತರ ಕಛೇರಿ, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11 ಮತ್ತು 11(ಎ)ರಲ್ಲಿನ ವಿಧಿವಿಧಾನಗಳಿಗನುಸಾರ ವಿಚಾರಣೆ ಜರುಗಿಸಿ, ವಿಚಾರಣಾ ವರದಿಯನ್ನು 3 (ಮೂರು) ತಿಂಗಳೊಳಗಾಗಿ ಸರ್ಕಾರಕ್ಕೆ ಒಪ್ಪಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್. 802

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

**ತಿದ್ದುಪಡಿ ಸಂಖ್ಯೆ: ಕಂಇ 723 ಮುನೋಮು 2004, ಬೆಂಗಳೂರು, ದಿನಾಂಕ: 19ನೇ ಮೇ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 144 ಮುನೋಮು 2003, ದಿನಾಂಕ:23ನೇ ಏಪ್ರಿಲ್ 2003 ರಲ್ಲಿನ ಕ್ರಮ ಸಂಖ್ಯೆ:28ರ ಅಡಿಯಲ್ಲಿ ಬರುವ ಸರ್ಕಾರಿ ಆದೇಶ ಸಂಖ್ಯೆ: RD 457 MUNOMU 1996, ದಿನಾಂಕ: 7.2.1997, 2.11.1999 ಮತ್ತು RD 197 MUNOMU 2001, ದಿನಾಂಕ: 9.10.2001 ರಲ್ಲಿನ ವಿಷಯದಲ್ಲಿ ಈ ಕೆಳಕಂಡಂತೆ ಅವಧಿಯನ್ನು ತಿದ್ದುಪಡಿ ಮಾಡಿ ಆದೇಶಿಸಿದೆ.

| ಹಾಲಿ ಇರುವ ಅವಧಿ | ತಿದ್ದುಪಡಿ ಮಾಡಿರುವ ಅವಧಿ |
|---|---|
| ಕೃಷ್ಣಾ ಮೇಲ್ದಂಡೆ ಯೋಜನೆಯಿಂದಾಗಿ ಮುಳುಗಡೆಯಾದ ಸ್ಥಿರಾಸ್ತಿಗಳನ್ನು ಕಳೆದುಕೊಂಡ ಸಂತ್ರಸ್ತ ಕುಟುಂಬದವರಿಗೆ ದೊರೆಯಬಹುದಾದ ಪರಿಹಾರ ಧನ ಮತ್ತು ಸಹಾಯ ಧನದ ಮೊತ್ತದಲ್ಲಿ ಖರೀದಿಸುವ ಸ್ಥಿರಾಸ್ತಿಗಳಿಗೆ ಪುನರ್ ವಸತಿ ಅಧಿಕಾರಿಗಳು ನೀಡಿರುವ ಪ್ರಮಾಣ ಪತ್ರದ ಆಧಾರದ ಮೇಲೆ ನೋಂದಣಿ ಮಾಡಿಸುವಾಗ ಬರೆದುಕೊಡುವ ಪತ್ರಗಳಿಗೆ ಸಂಬಂಧಿಸಿದಂತೆ ಮಾತ್ರ ತಗಲುವ ಮುದ್ರಾಂಕ ಶುಲ್ಕ ವಿನಾಯಿತಿ ನೀಡಲಾಗಿದೆ. ಪರಂತು ಈ ವಿನಾಯಿತಿ ಪರಿಹಾರ ಧನ ಮತ್ತು ಸಹಾಯಕ ಧನವನ್ನು ಸ್ವೀಕರಿಸಿದ ದಿನಾಂಕದಿಂದ 4 ವರ್ಷದ ಅವಧಿಗೆ ಮಾತ್ರ ಅನ್ವಯಿಸತಕ್ಕದ್ದು. | ಕೃಷ್ಣಾ ಮೇಲ್ದಂಡೆ ಯೋಜನೆಯಿಂದಾಗಿ ಮುಳುಗಡೆಯಾದ ಸ್ಥಿರಾಸ್ತಿಗಳನ್ನು ಕಳೆದುಕೊಂಡ ಸಂತ್ರಸ್ತ ಕುಟುಂಬದವರಿಗೆ ದೊರೆಯಬಹುದಾದ ಪರಿಹಾರ ಧನ ಮತ್ತು ಸಹಾಯ ಧನದ ಮೊತ್ತದಲ್ಲಿ ಖರೀದಿಸುವ ಸ್ಥಿರಾಸ್ತಿಗಳಿಗೆ ಪುನರ್ ವಸತಿ ಅಧಿಕಾರಿಗಳು ನೀಡಿರುವ ಪ್ರಮಾಣ ಪತ್ರದ ಆಧಾರದ ಮೇಲೆ ನೋಂದಣಿ ಮಾಡಿಸುವಾಗ ಬರೆದುಕೊಡುವ ಪತ್ರಗಳಿಗೆ ಸಂಬಂಧಿಸಿದಂತೆ ಮಾತ್ರ ತಗಲುವ ಮುದ್ರಾಂಕ ಶುಲ್ಕ ವಿನಾಯಿತಿ ನೀಡಲಾಗಿದೆ. ಪರಂತು ಈ ವಿನಾಯಿತಿ ಪರಿಹಾರ ಧನ ಮತ್ತು ಸಹಾಯಕ ಧನವನ್ನು ಸ್ವೀಕರಿಸಿದ ದಿನಾಂಕದಿಂದ 5 ವರ್ಷದ ಅವಧಿಗೆ ಮಾತ್ರ ಅನ್ವಯಿಸತಕ್ಕದ್ದು. |

ಉಳಿದಂತೆ ಬದಲಾವಣೆ ಏನೂ ಇರುವುದಿಲ್ಲ.

**ಡಿ.ಎನ್. ಶ್ರೀಮುಖಿ**

ಪಿ.ಆರ್. 803

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಶ್ರೀ ಆರ್.ಟಿ. ಕೃಷ್ಣಪ್ಪ, ಹಿಂದಿನ ಶಿರಸ್ತೇದಾರ್, ತಾಲ್ಲೂಕು ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ನಿವೃತ್ತ ತಹಶೀಲ್ದಾರ್ ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ಇವರುಗಳನ್ನು ಆರೋಪಗಳಿಂದ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ:30.10.2003ರ ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 32 ಎಡಿಇ 01.
2. ಶ್ರೀ ವೈ.ಆರ್. ಸಾವಕಾರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕ:15.10.2004ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ಲಗ್ಗೆರೆ ಗ್ರಾಮದ ಸರ್ವೆ ನಂ:8/4ರಲ್ಲಿನ 3 ಎಕರೆ 4 ಗುಂಟೆ ವಿಸ್ತೀರ್ಣದ ಜಮೀನಿನ ಪಹಣಿಗಳನ್ನು ಫೋರ್ಜರಿ ಮಾಡಿ ಅಕ್ರಮವಾಗಿ ಕೆಲವು ಪಹಣಿಯ ಪುಟಗಳನ್ನು ಸೇರಿಸಲಾಗಿದೆಯೆಂದು ಶ್ರೀ ಪಿ.ಬಿ. ಸುದರ್ಶನ್ ಬಿನ್ ಲೇಟ್ ಪಿ.ವಿ. ಗೋಪಾಲ ಐಯ್ಯಂಗಾರ್ ಇವರು ಹಿಂದಿನ ಬೆಂಗಳೂರು ವಿಭಾಗಾಧಿಕಾರಿಯವರಿಗೆ ದೂರು ಅರ್ಜಿ ಸಲ್ಲಿಸಿದ್ದರ ಮೇರೆಗೆ ವಿಭಾಗಾಧಿಕಾರಿಯವರ ಸೂಚನೆಯಂತೆ ಸದರಿ ಆರೋಪಗಳ ಬಗ್ಗೆ ಬೆಂಗಳೂರು ಉತ್ತರ ಉಪ ವಿಭಾಗಾಧಿಕಾರಿಗಳು ಪ್ರಾಥಮಿಕ ತನಿಖೆ ನಡೆಸಿ 1970-71 ರಿಂದ 1997-98ನೇ ಸಾಲಿನವರೆಗೆ ಶ್ರೀ ವೆಂಕಟಪ್ಪ ಬಿನ್ ಗುರಪ್ಪ ಎಂಬುವವರ ಹೆಸರಿರುವ ಪಹಣಿಯನ್ನು ಅಕ್ರಮವಾಗಿ ಸೇರಿಸಿರುವುದು ದೃಢಪಟ್ಟಿರುತ್ತದೆಯೆಂದು ವರದಿ ಮಾಡಿರುವರೆಂದು ಅಂದಿನ ವಿಭಾಗಾಧಿಕಾರಿಯವರು ಅರ್ಜಿದಾರರ ಆರೋಪಗಳಲ್ಲಿ ಸತ್ಯಾಂಶಗಳಿವೆಯೆಂದು

ಮನಗಂಡು ಈ ಕೆಳಕಂಡ ನೌಕರರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸುವಂತೆ ಕೋರಿದ್ದರ ಮೇರೆಗೆ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ವೈ.ಆರ್. ಸಾವಕಾರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು.

**ಶ್ರೀಯುತರು:**

1. ಶ್ರೀ ಆರ್.ಟಿ. ಕೃಷ್ಣಪ್ಪ, ಹಿಂದಿನ ಶಿರಸ್ತೇದಾರ್, ತಾಲ್ಲೂಕು ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ನಿವೃತ್ತ ತಹಶೀಲ್ದಾರ್.
2. ಅಬ್ಬಾಸ್ ಅಲಿ, ಹಿಂದಿನ ಶಿರಸ್ತೇದಾರ್, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.
3. ಎ.ಆರ್. ಮುನಿಸ್ವಾಮಿ, ಹಿಂದಿನ ಆರ್.ಆರ್. ಶಿರಸ್ತೇದಾರ್, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.
4. ಬಿ. ಶಿವನಂಜಪ್ಪ, ಹಿಂದಿನ ದ್ವಿ.ದ.ಸ., ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.
5. ಸಿ. ರಾಮಲಕ್ಷ್ಮಯ್ಯ, ಹಿಂದಿನ ದ್ವಿ.ದ.ಸ. (ಅಭಿಲೇಖಾಲಯ) ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.

ವಿಚಾರಣಾಧಿಕಾರಿಗಳು ಪ್ರಕರಣದಲ್ಲಿನ ಜಂಟಿ ಇಲಾಖಾ ವಿಚಾರಣೆ ಜರುಗಿಸಿ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:15.10.2004ರ ತಮ್ಮ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಅದರಂತೆ ವಿಚಾರಣಾ ಪ್ರಕ್ರಿಯೆಗೆ ಸಂಬಂಧಿಸಿದ ಯಾವ ಸಾಕ್ಷಿದಾರರು ಮೇಲ್ಕಂಡ ಆರೋಪಿತರೆಂದು ಹೇಳಲಾಗಿರುವವರ ವಿರುದ್ಧ ಸಾಕ್ಷಿ ನೀಡಿರುವುದಿಲ್ಲವೆಂದು ಆದುದರಿಂದ ಈ ಮೇಲ್ಕಂಡ 5 ಮಂದಿ ಆಪಾದಿತರ ಮೇಲೆ ಮಾಡಲಾದ ಆರೋಪಗಳು ರುಜುವಾತು ಆಗುವುದಿಲ್ಲವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಸದರಿ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಿ, ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಮೇಲೆ ನಮೂದಿಸಿರುವ 5 ಮಂದಿ ನೌಕರರ ವಿರುದ್ಧದ ಆಪಾದನೆಗಳು ಸಾಬೀತಾಗದಿರುವುದು ಸ್ಪಷ್ಟವಾಗಿರುವುದರಿಂದ ಇವರುಗಳನ್ನು ಆರೋಪಗಳಿಂದ ಮುಕ್ತಗೊಳಿಸಲು ನಿರ್ಧರಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 32 ಎಡಿಇ 2001, ಬೆಂಗಳೂರು, ದಿನಾಂಕ: 30ನೇ ಮೇ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡ ಅಧಿಕಾರಿ:ನೌಕರರ ವಿರುದ್ಧ ದಿನಾಂಕ: 30.10.2003ರ ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 32 ಎಡಿಇ 2001ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಿದೆ:

**ಶ್ರೀಯುತರು:**

1. ಶ್ರೀ ಆರ್.ಟಿ. ಕೃಷ್ಣಪ್ಪ, ಹಿಂದಿನ ಶಿರಸ್ತೇದಾರ್, ತಾಲ್ಲೂಕು ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ನಿವೃತ್ತ ತಹಶೀಲ್ದಾರ್.
2. ಅಬ್ಬಾಸ್ ಅಲಿ, ಹಿಂದಿನ ಶಿರಸ್ತೇದಾರ್, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.
3. ಎ.ಆರ್. ಮುನಿಸ್ವಾಮಿ, ಹಿಂದಿನ ಆರ್.ಆರ್. ಶಿರಸ್ತೇದಾರ್, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.
4. ಬಿ. ಶಿವನಂಜಪ್ಪ, ಹಿಂದಿನ ದ್ವಿ.ದ.ಸ., ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.
5. ಸಿ. ರಾಮಲಕ್ಷ್ಮಯ್ಯ, ಹಿಂದಿನ ದ್ವಿ.ದ.ಸ. (ಅಭಿಲೇಖಾಲಯ) ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಮಾತ್ರ ಈ ಮೇಲೆ ನಮೂದಿಸಿರುವ 5 ಮಂದಿ ಅಧಿಕಾರಿ:ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸದಿದ್ದಲ್ಲಿ ಇವರುಗಳು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 804

ಎಂ.ಎಸ್. ಮಹಂತೇಶಯ್ಯ

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

**ಸುತ್ತೋಲೆ ಸಂಖ್ಯೆ:ಆರ್‌ಡಿ 86 ಎಲ್‌ಜಿಯು 2004, ಬೆಂಗಳೂರು, ದಿನಾಂಕ 28ನೇ ಮೇ 2005**

**ವಿಷಯ:** ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯ ಮುಂದೆ ಇರುವ ಜಮೀನಿನ ಒತ್ತುವರಿ ಸಕ್ರಮೀಕರಣ ಮಾಡುವ ಬಗ್ಗೆ ತಡೆಹಿಡಿದಿರುವ ಕುರಿತು.

**ಉಲ್ಲೇಖ:** ಸುತ್ತೋಲೆ ಸಂಖ್ಯೆ:ಆರ್‌ಡಿ 57 ಎಲ್‌ಜಿಪಿ 2001, ದಿನಾಂಕ:19.12.2001.

ಉಲ್ಲೇಖ (1)ರ ಸುತ್ತೋಲೆಯಲ್ಲಿ ಈ ಕೆಳಕಂಡಂತೆ ಸೂಚನೆಗಳನ್ನು ನೀಡಲಾಗಿತ್ತು.

"ಮೇಲ್ಕಂಡ ವಿಷಯದಲ್ಲಿ ಉಲ್ಲೇಖಗಳ ಇ-ಮೇಲ್ ಮತ್ತು ಸುತ್ತೋಲೆಗಳತ್ತ ಗಮನ ಸೆಳೆಯಲಾಗಿದೆ.

ಈ ಬಗ್ಗೆ ಕರ್ನಾಟಕ ಉಚ್ಛ ನ್ಯಾಯಾಲಯದಲ್ಲಿ ಶ್ರೀ ಗಂಗಚನ್ನಯ್ಯ ಹಾಗೂ ಇತರರು ಸರ್ಕಾರದ ವಿರುದ್ಧ ಸಲ್ಲಿಸಿರುವ ರಿಟ್ ಅರ್ಜಿ ಸಂ:25310:01 ರಲ್ಲಿ 16.8.2001 ದಿನಾಂಕದಂದು ಉಚ್ಛ ನ್ಯಾಯಾಲಯವು ನೀಡಿರುವ ತಾತ್ಕಾಲಿಕ ತಡೆಯಾಜ್ಞೆ ಅನ್ವಯ ಈ ಪ್ರಕರಣದಲ್ಲಿ ಉಚ್ಛ ನ್ಯಾಯಾಲಯವು ಅಂತಿಮ ತೀರ್ಮಾನ ನೀಡುವವರೆಗೆ ಹಾಗೂ ಮುಂದಿನ ಆದೇಶದವರೆಗೆ ಗೋಮಾಳ ಜಮೀನುಗಳ ಮಂಜೂರಾತಿ ಮಾಡಬಾರದೆಂದು ಹಾಗೂ ಸಕ್ರಮೀಕರಣಗೊಳಿಸಲು ನಮೂನೆಗಳು 50 ಮತ್ತು 53 ರಲ್ಲಿ ಸಲ್ಲಿಸಿರುವ ಅರ್ಜಿಗಳನ್ನು ಸಮಿತಿಗಳ ಮುಂದೆ ಮಂಡಿಸಬಾರದೆಂದು ಉಲ್ಲೇಖ (1) ಹಾಗೂ ಉಲ್ಲೇಖ (2)ರ ಸುತ್ತೋಲೆಗಳಲ್ಲಿ ಸೂಚನೆಗಳನ್ನು ನೀಡಲಾಗಿದೆ. ಈಗ ರಿಟ್ ಅರ್ಜಿ ಸಂಖ್ಯೆ:25310:2001ರ ಬಗ್ಗೆ ದಿನಾಂಕ:30.11.2001ರಲ್ಲಿ ನೀಡಿರುವ ಆದೇಶದಲ್ಲಿ ದಿನಾಂಕ:16.8.2001ರಂದು ನೀಡಿರುವ ತಡೆಯಾಜ್ಞೆಯು ಇದೇ ರಿಟ್ ಅರ್ಜಿಯಲ್ಲಿ ಪ್ರಶ್ನಿಸಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕು, ಕೊನಘಟ್ಟ ಗ್ರಾಮದ ಸ.ನಂ.128, 130, 131 ಮತ್ತು 134ಕ್ಕೆ ಮಾತ್ರ ಸೀಮಿತವಾಗಿರುತ್ತದೆಂದು ತಿಳಿಸಿದೆ. ಈ ಬಗ್ಗೆ ಸರ್ಕಾರ ಮುಂದಿನ ಕ್ರಮ ತೆಗೆದುಕೊಳ್ಳಬಹುದಾಗಿದ್ದು, ಸರ್ಕಾರದ ತೀರ್ಮಾನವು ಈ ರಿಟ್ ಅರ್ಜಿಯ ಅಂತಿಮ ಆದೇಶಕ್ಕೆ ಒಳಪಟ್ಟಿರುವುದಾಗಿ ತಿಳಿಸಿದೆ".

ಜಿಲ್ಲಾಧಿಕಾರಿ ಚಿಕ್ಕಮಗಳೂರು ಇವರು ದಿನಾಂಕ: 24.11.2004ರ ಅರೆ ಸರ್ಕಾರಿ ಪತ್ರದಲ್ಲಿ ಮೇಲ್ಕಂಡ ದಿನಾಂಕ:19.12.2000ದ ಆದೇಶವನ್ನು ಅನುಸರಿಸಿ "ನ್ಯಾಯಾಲಯದಲ್ಲಿ ಬಾಕಿಯಿರುವ ರಿಟ್ ಅರ್ಜಿ ಸಂಖ್ಯೆ:25310:2001ರ ಅಂತಿಮ ತೀರ್ಪಿಗೆ ಒಳಪಟ್ಟಿದೆ" ಎಂಬ ಷರತ್ತು ವಿಧಿಸಿ ಗೋಮಾಳ ಜಮೀನುಗಳ ಸಕ್ರಮೀಕರಣ ಅಥವಾ ಮಂಜೂರಾತಿಗೆ ಕ್ರಮ ಕೈಗೊಳ್ಳಲಾಗುತ್ತಿದ್ದು, ಈಗ ಸದರಿ ರಿಟ್ ಅರ್ಜಿ ಅಡಿ ದಿನಾಂಕ:6.2.2004ರಂದು ಗೋಮಾಳ ಜಮೀನಿಗೆ ಸಂಬಂಧಿಸಿದ ಸಾರ್ವಜನಿಕ ಹಿತಾಸಕ್ತಿ ಅರ್ಜಿಯು ವಜಾ ಆಗಿರುವುದರಿಂದ ನಮೂನೆ 50, 53ರ ಅರ್ಜಿಗಳ ಮೇರೆಗೆ ಸಕ್ರಮಗೊಳಿಸಲಾದ ಜಮೀನುಗಳ ಹಕ್ಕು ಪತ್ರದಲ್ಲಿ ಮೇಲ್ಕಂಡ ಷರತ್ತನ್ನು ತೆಗೆದು ಹಾಕಿ, ಜಮೀನು ಅಭಿವೃದ್ಧಿಗೆ ಬ್ಯಾಂಕುಗಳಿಂದ ಸಾಲ ಪಡೆಯುವಲ್ಲಿ ರೈತರಿಗೆ ಆಗುತ್ತಿರುವ ಅನಾನುಕೂಲತೆಯನ್ನು ತಪ್ಪಿಸಲು ದಿನಾಂಕ:19.12.2001ರ ಸುತ್ತೋಲೆ ಅನ್ವಯ ವಿಧಿಸಲಾಗುತ್ತಿರುವ ಷರತ್ತನ್ನು ಕೈಬಿಡುವ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುವರು.

ಆದುದರಿಂದ ಸರ್ಕಾರದ ಹಂತದಲ್ಲಿ ಈ ವಿಷಯವನ್ನು ಪರಿಶೀಲಿಸಿ ಈ ಹಿಂದೆ ದಿನಾಂಕ: 11.12.2001ರಂದು ಕರ್ನಾಟಕ ಉಚ್ಚ ನ್ಯಾಯಾಲಯದವರು ದಿನಾಂಕ:6.2.2004ರ ಅಂತಿಮ ಆದೇಶದಲ್ಲಿ ಗೋಮಾಳ ಜಮೀನಿಗೆ ಸಂಬಂಧಿಸಿದಂತೆ ಸಾರ್ವಜನಿಕ ಹಿತಾಸಕ್ತಿಗೆ ಒಳಪಟ್ಟ ರಿಟ್ ಅರ್ಜಿ ಸಂಖ್ಯೆ:25310:2001ನ್ನು ವಜಾಕರಿಸಿರುವ ಕಾರಣ, ದಿನಾಂಕ:19.12.2001ರ ಸುತ್ತೋಲೆ ಅನುಸರಿಸಿ ಅನಧಿಕೃತ ಒತ್ತುವರಿಯಲ್ಲಿನ ಜಮೀನುಗಳ ಸಕ್ರಮೀಕರಣಗೊಳಿಸಲು ನಮೂನೆ 50 ಮತ್ತು 53ರ ಹಾಗೂ ಗೋಮಾಳ ಜಮೀನುಗಳ ಮತ್ತು ಮಂಜೂರಾತಿಯಲ್ಲಿ ವಿಧಿಸುವ ಷರತ್ತುಗಳನ್ನು ತೆಗೆದು ಹಾಕಲು ಮತ್ತು ಇನ್ನು ಮುಂದೆ ಸದರಿ ಷರತ್ತುಗಳನ್ನು ವಿಧಿಸಬಾರದು ಎಂದು ಸೂಚಿಸಲಾಗಿದೆ.

**ಎನ್.ಎ. ಮಾರ್ಗರೇಟ್**

ಪಿ.ಆರ್. 805 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ.ಮಂ)

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ:** 'ಸಿನಿಮಾ ಅಪರೇಟರುಗಳ' ಪರೀಕ್ಷೆಯ ಪರೀಕ್ಷಕರುಗಳ ಮಂಡಳಿಯನ್ನು ಪುನರ್ ರಚಿಸುವ ಬಗ್ಗೆ ಸರ್ಕಾರದ ಆದೇಶ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ 17 ಸಿಎನ್‌ಎ 99, ದಿನಾಂಕ: 3.8.1999.

2. ಮುಖ್ಯ ವಿದ್ಯುತ್ ಪರಿವೀಕ್ಷಕರು, ಕರ್ನಾಟಕ ವಿದ್ಯುತ್‌ಚ್ಛಕ್ತಿ ಮಂಡಳಿ, ಬೆಂಗಳೂರು, ರವರ ಪತ್ರ ಸಂಖ್ಯೆ:ಮು.ವಿ.ಪ: ಉಮುವಿಪ:ವಿಪ(ಆ):ಸಿನಿಮಾ:23121/04-05. ದಿನಾಂಕ 29.12.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶ ದಿನಾಂಕ 3.8.99ರಲ್ಲಿ ಸಿನೇಮ ಅಪರೇಟರ್ಸ್ ಎಕ್ಸಾಮಿನೇಷನ್ ಪರೀಕ್ಷಾ ಮಂಡಳಿಯನ್ನು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಸಮಿತಿಯನ್ನು ರಚಿಸಲಾಗಿತ್ತು.

| | | | |
|---|---|---|---|
| 1. | ಸರ್ಕಾರದ ಮುಖ್ಯ ವಿದ್ಯುಚ್ಛಕ್ತಿ ಪರೀಕ್ಷಕರು, ಬೆಂಗಳೂರು | - | ಅಧ್ಯಕ್ಷರು |
| 2. | ಸರ್ಕಾರದ ಡೆಪ್ಯೂಟಿ ವಿದ್ಯುಚ್ಛಕ್ತಿ ಪರೀಕ್ಷಕರು, ಬೆಂಗಳೂರು | - | ಸದಸ್ಯ ಕಾರ್ಯದರ್ಶಿ |
| 3. | ಶ್ರೀ ಬಿ.ಜಿ. ರಮೇಶ್, ಲೆಕ್ಚರರ್ (ಸೌಂಡ್ ಅಂಡ್ ಟಿ.ವಿ) ಎಸ್.ಜೆ. ಪಾಲಿಟೆಕ್ನಿಕ್, ಬೆಂಗಳೂರು. | - | ಸದಸ್ಯರು |
| 4. | ಶ್ರೀ ಎಸ್. ವೆಂಕಟೇಶ ಮೂರ್ತಿ, ಲೆಕ್ಚರರ್ , ಇನ್ ಸಿನೇಮ ಎಸ್.ಜೆ. ಪಾಲಿಟೆಕ್ನಿಕ್, ಬೆಂಗಳೂರು. | - | ಸದಸ್ಯರು |
| 5. | ಶ್ರೀ ಡಿ.ಆರ್. ಜೈರಾಜ್, ಉಪಾಧ್ಯಕ್ಷರು, ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ, ಬೆಂಗಳೂರು. | - | ಸದಸ್ಯರು |
| 6. | ಶ್ರೀ ಥಾಮಸ್ ಡಿಸೋಜ, ಗೌ.ಕಾರ್ಯದರ್ಶಿ, ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ, ಬೆಂಗಳೂರು. | - | ಸದಸ್ಯರು |

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ದಿನಾಂಕ: 29.12.04ರ ಪತ್ರದಲ್ಲಿ ಸರ್ಕಾರಿ ಪರಿವೀಕ್ಷಕರು, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ, ಬೆಂಗಳೂರು ರವರು ಸದರಿ ಮಂಡಳಿಯ ಅಧ್ಯಕ್ಷರು ಮೂರು ವರ್ಷಗಳಾಗಿದ್ದು, ದಿನಾಂಕ 3.8.05ಕ್ಕೆ ಸಮಿತಿಯನ್ನು ರಚಿಸಬೇಕಾಗುತ್ತದೆ ಹಾಗೂ ಸಿನೇಮಾ ಆಪರೇಟರ್ಸ್ ಪರೀಕ್ಷೆಕೈಗೊಳ್ಳಲು ಹಾಗೂ ಅಭ್ಯರ್ಥಿಗಳ ಪರಿಶೀಲನೆ ಮಾಡಬೇಕಾಗಿರುವ ಹಿನ್ನೆಲೆಯ ಅಂಶಗಳನ್ನು ಸರ್ಕಾರದ ಗಮನಕ್ಕೆ ತಂದು ಸಿನೇಮ ಆಪರೇಟರ್ಸ್ ಪರೀಕ್ಷೆಗೆ, ಪರೀಕ್ಷಕರುಗಳ ಮಂಡಳಿ ಅವಶ್ಯಕತೆಯನ್ನು ನಿವೇದಿಸಿ ಪುನಃ ಮೂರು ವರ್ಷಗಳ ಅವಧಿಗೆ ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯನ್ನು ಪುನರ್ ರಚಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| | | | |
|---|---|---|---|
| 1. | ಸರ್ಕಾರದ ಮುಖ್ಯ ವಿದ್ಯುಚ್ಛಕ್ತಿ ಪರೀಕ್ಷಕರು, ಬೆಂಗಳೂರು | - | ಅಧ್ಯಕ್ಷರು |
| 2. | ವಿದ್ಯುಚ್ಛಕ್ತಿ ಪರೀಕ್ಷಕರು (ಆಡಳಿತ, ತೆರಿಗೆ ಹಾಗೂ ಕೈಪಿಡಿ) ಕೇಂದ್ರ ಕಛೇರಿ, ಬೆಂಗಳೂರು. | - | ಸದಸ್ಯ ಕಾರ್ಯದರ್ಶಿ |
| 3. | ಶ್ರೀ ಜೆ. ರಮೇಶ್, ಇಲಾಖಾ ಮುಖ್ಯಸ್ಥರು (ಸೌಂಡ್ ಅಂಡ್ ಟಿ.ವಿ) ಎಸ್.ಜೆ. ಪಾಲಿಟೆಕ್ನಿಕ್, ಬೆಂಗಳೂರು. | - | ಸದಸ್ಯರು |
| 4. | ಶ್ರೀ ಆರ್. ವಿಜಯಕುಮಾರ್, ಇಲಾಖಾ ಮುಖ್ಯಸ್ಥರು (ಪ್ರಭಾರ) (ಸಿನಿಮಾಟೋಗ್ರಾಫಿ) ಎಸ್.ಜೆ. ಪಾಲಿಟೆಕ್ನಿಕ್, ಬೆಂಗಳೂರು. | - | ಸದಸ್ಯರು |
| 5. | ಶ್ರೀ ಕೆ.ಎನ್. ವಾಸುದೇವ ಮೂರ್ತಿ, ಉಪಾಧ್ಯಕ್ಷರು, ಕರ್ನಾಟಕ ಚಲನಚಿತ್ರ ಮತ್ತು ವಾಣಿಜ್ಯ ಮಂಡಳಿ, ಬೆಂಗಳೂರು. | - | ಸದಸ್ಯರು |
| 6. | ಶ್ರೀ ಥಾಮಸ್ ಡಿಸೋಜ, ಗೌ.ಕಾರ್ಯದರ್ಶಿ, ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ, ಬೆಂಗಳೂರು. | - | ಸದಸ್ಯರು |

ಈ ಮೇಲಿನ ಎಲ್ಲಾ ಅಂಶಗಳನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

### ಸರ್ಕಾರಿ ಆದೇಶ ಸಂಖ್ಯೆ: HD 1 CNA 2005, ಬೆಂಗಳೂರು, ದಿನಾಂಕ: 21ನೇ ಮೇ 2005

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಸಿನೇಮ ಆಪರೇಟರ್ಸ್ ಎಕ್ಸಾಮಿನೇಷನ್ ಪರೀಕ್ಷಾ ಮಂಡಳಿಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಮೂರು ವರ್ಷಗಳವರೆವಿಗೆ ಈ ಕೆಳಕಾಣಿಸಿದವರನ್ನು ಸದಸ್ಯರನ್ನಾಗಿ ನೇಮಿಸಿ ಪುನರ್ ರಚಿಸಿ ಆದೇಶಿಸಿದೆ.

| | | | |
|---|---|---|---|
| 1. | ಸರ್ಕಾರದ ಮುಖ್ಯ ವಿದ್ಯುಚ್ಛಕ್ತಿ ಪರೀಕ್ಷಕರು, ಬೆಂಗಳೂರು | - | ಅಧ್ಯಕ್ಷರು |
| 2. | ವಿದ್ಯುಚ್ಛಕ್ತಿ ಪರೀಕ್ಷಕರು (ಆಡಳಿತ, ತೆರಿಗೆ ಹಾಗೂ ಕೈಪಿಡಿ) ಕೇಂದ್ರ ಕಛೇರಿ, ಬೆಂಗಳೂರು. | - | ಸದಸ್ಯ ಕಾರ್ಯದರ್ಶಿ |
| 3. | ಶ್ರೀ ಜೆ. ರಮೇಶ್, ಇಲಾಖಾ ಮುಖ್ಯಸ್ಥರು (ಸೌಂಡ್ ಅಂಡ್ ಟಿ.ವಿ) ಎಸ್.ಜೆ. ಪಾಲಿಟೆಕ್ನಿಕ್, ಬೆಂಗಳೂರು. | - | ಸದಸ್ಯರು |
| 4. | ಶ್ರೀ ಆರ್. ವಿಜಯಕುಮಾರ್, ಇಲಾಖಾ ಮುಖ್ಯಸ್ಥರು (ಪ್ರಭಾರ) (ಸಿನಿಮಾಟೋಗ್ರಾಫಿ) ಎಸ್.ಜೆ. ಪಾಲಿಟೆಕ್ನಿಕ್, ಬೆಂಗಳೂರು. | - | ಸದಸ್ಯರು |
| 5. | ಶ್ರೀ ಕೆ.ಎನ್. ವಾಸುದೇವ ಮೂರ್ತಿ, ಉಪಾಧ್ಯಕ್ಷರು, ಕರ್ನಾಟಕ ಚಲನಚಿತ್ರ ಮತ್ತು ವಾಣಿಜ್ಯ ಮಂಡಳಿ, ಬೆಂಗಳೂರು. | - | ಸದಸ್ಯರು |
| 6. | ಶ್ರೀ ಥಾಮಸ್ ಡಿಸೋಜ, ಗೌ.ಕಾರ್ಯದರ್ಶಿ, ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ, ಬೆಂಗಳೂರು. | - | ಸದಸ್ಯರು |

ಸದರಿ ಮಂಡಳಿಯು ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 30 ಸಿಎನ್‌ಎಲ್ 90 ದಿನಾಂಕ: 31.12.1974ರ ಅನುಬಂಧದಲ್ಲಿನ ನಿಯಮಗಳಿಗನುಸಾರ ಕಾರ್ಯನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ಕಾಂತರಾಜು**

ಪಿ.ಆರ್. 806 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## ಕಂದಾಯ ಸಚಿವಾಲಯ

**ವಿಷಯ:** ರವೀಂದ್ರನಾಥ ಠಾಗೂರ್ ಇನ್‌ಸ್ಟಿಟ್ಯೂಟ್ ಈ ಸಂಸ್ಥೆಗೆ ನೇಮಕ ಮಾಡಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಕಂಇ 30 ಮುನೊಸೊ 2002, ದಿನಾಂಕ:11.2.2003.
2. ರಿ.ಪಿ. ಸಂಖ್ಯೆ:17745-17447/2004, ದಿನಾಂಕ: 22.2.2005.
3. ಸರ್ಕಾರದ ಆದೇಶ ಸಂಖ್ಯೆ:ಕಂಇ 54 ಮುನೊಸೊ 2003, ದಿನಾಂಕ:13.4.2005.
4. ಆಡಳಿತಾಧಿಕಾರಿಗಳು, ರವೀಂದ್ರನಾಥ ಠಾಗೂರ್ ಇನ್‌ಸ್ಟಿಟ್ಯೂಟ್ ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬ್ಬಂದಿ/ಸಿಆರ್/49/2003, ದಿನಾಂಕ:26.5.2005.

**ಪ್ರಸ್ತಾವನೆ:**

ರವೀಂದ್ರನಾಥ ಠಾಗೂರ್ ಇನ್‌ಸ್ಟಿಟ್ಯೂಟ್, ಆರ್.ಟಿ. ನಗರ, ಬೆಂಗಳೂರು ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-11,12 ಮತ್ತು 13 ಗಳನ್ನು ಉಲ್ಲಂಘನೆ ಮಾಡಿದ್ದರಿಂದ ಮೇಲೆ-1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ನಂತರ ಆಡಳಿತಾಧಿಕಾರಿ ಅವಧಿಯನ್ನು ಕಾಲ ಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದ್ದು, ಮೇಲೆ 2ರಲ್ಲಿ ಓದಲಾದ ರಿ.ಪಿ.ಸಂಖ್ಯೆ: 17745-17747/2004ರಲ್ಲಿ ದಿನಾಂಕ: 22.2.2005ರಂದು ನೀಡಿರುವ ಆದೇಶದನ್ವಯ ಮೇಲೆ-3ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿದ್ದ ಆಡಳಿತಾಧಿಕಾರಿ ಅವಧಿಯು ದಿನಾಂಕ:10.5.2005ಕ್ಕೆ ಮುಕ್ತಾಯಗೊಂಡಿರುತ್ತದೆ.

ಮೇಲೆ-4ರಲ್ಲಿ ಓದಲಾದ ಪತ್ರದಲ್ಲಿ ಆಡಳಿತಾಧಿಕಾರಿಯವರು ಮೇಲೆ-(2)ರಲ್ಲಿ ಓದಲಾಗಿರುವ ನ್ಯಾಯಾಲಯದ ಆದೇಶದಂತೆ ಸಂಸ್ಥೆಗೆ ಚುನಾವಣೆ ನಡೆಸಬೇಕಾಗಿರುವುದರಿಂದ ಆಡಳಿತಾಧಿಕಾರಿ ಅವಧಿಯನ್ನು ಪುನಃ ವಿಸ್ತರಿಸುವಂತೆ ತೋರಿರುತ್ತಾರೆ. ಸದರಿಯವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು, ವಿಸ್ತರಣಾ ಅವಧಿಯೊಳಗಾಗಿ ಸಂಸ್ಥೆಗೆ ಚುನಾವಣೆಯನ್ನು ಕಡ್ಡಾಯವಾಗಿ ನಡೆಸಲು ಮತ್ತು ತತ್ಸಂಬಂಧ ನ್ಯಾಯಾಲಯದ ಸಹಮತಿ ಪಡೆಯುವ ಷರತ್ತಿಗೊಳಪಡಿಸಿ ದಿನಾಂಕ:11.5.2005ರಿಂದ 3 ತಿಂಗಳವರೆಗೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: 54 ಮುನೋಸೊ 2003, ಬೆಂಗಳೂರು, ದಿನಾಂಕ: 3ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರವೀಂದ್ರನಾಥ ಠಾಗೂರ್ ಇನ್‌ಸ್ಟಿಟ್ಯೂಟ್, ರಾಮಯ್ಯ ಗಾರ್ಡನ್, ಗಣೇಶ ಬ್ಲಾಕ್, ದಿಣ್ಣೂರು ಮುಖ್ಯರಸ್ತೆ, ಆರ್.ಟಿ. ನಗರ, ಬೆಂಗಳೂರು-32, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-27-ಎ ಪ್ರಕಾರ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:11.5.2005 ರಿಂದ ಮತ್ತೆ 3 ತಿಂಗಳವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ವಿಸ್ತರಣಾ ಅವಧಿಯೊಳಗಾಗಿ ಕಡ್ಡಾಯವಾಗಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆಯೂ ಮತ್ತು ಈ ವಿಸ್ತರಣಾ ಅವಧಿಗೆ ನ್ಯಾಯಾಲಯದ ಸಹಮತಿ ಪಡೆಯುವಂತೆಯೂ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 807 **ಎಂ.ಪಿ. ಮಂಜುನಾಥ್**

ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ನವೋದಯ ವಿದ್ಯಾ ಸಂಘ (ರಿ) ಚನ್ನರಾಯಪಟ್ಟಣ, ಈ ಸಂಘಕ್ಕೆ ನೇಮಕವಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಕಂಇ 48 ಮುನೊಸೊ 2000, ದಿನಾಂಕ:16.6.2001.
2. ಸರ್ಕಾರದ ಆದೇಶ ಸಂಖ್ಯೆ:ಕಂಇ 48 ಮುನೊಸೊ 2000, ದಿನಾಂಕ:4.9.2003.
3. ಸರ್ಕಾರದ ಆದೇಶ ಸಂಖ್ಯೆ:ಕಂಇ 57 ಮುನೊಸೊ 2003, ದಿನಾಂಕ:23.7.2004.
4. ಆಡಳಿತಾಧಿಕಾರಿ ನವೋದಯ ವಿದ್ಯಾ ಸಂಘ (ರಿ) ರವರ ಪತ್ರ ಸಂಖ್ಯೆ:ನವಿಸ:ಚ.ರಾ.ಪ:ಅಅವಿ:ದಿನಾಂಕ:3.2.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ನವೋದಯ ವಿದ್ಯಾ ಸಂಸ್ಥೆ(ರಿ) ಚನ್ನರಾಯಪಟ್ಟಣ, ಈ ಸಂಘಕ್ಕೆ ಸಂಘದ ಹಿತದೃಷ್ಟಿಯಿಂದ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ರ ಪ್ರಕಾರ 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ತದನಂತರ ಕಾಲಕಾಲಕ್ಕೆ ಮೇಲೆ ಓದಲಾದ (2) ಮತ್ತು (3) ರ ಸರ್ಕಾರಿ ಆದೇಶದಲ್ಲಿ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ:15.12.2004ರವರೆಗೆ ವಿಸ್ತರಿಸಲಾಗಿದೆ. ಮೇಲೆ ಓದಲಾದ (4)ರಲ್ಲಿ ಸಂಘದ ಆಡಳಿತಾಧಿಕಾರಿಯವರು ನೀಡಿರುವ ವರದಿಯನ್ನು ಸರ್ಕಾರವು ಪರಿಶೀಲಿಸಿದ್ದು, ದಿನಾಂಕ: 16.12.2004ರಿಂದ ಮತ್ತೆ 6 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 57 ಮುನೊಸೊ 2003, ಬೆಂಗಳೂರು, ದಿನಾಂಕ: 4ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-27-ಎ ಪ್ರಕಾರ ನವೋದಯ ವಿದ್ಯಾ ಸಂಸ್ಥೆ(ರಿ), ಚನ್ನರಾಯಪಟ್ಟಣ, ಈ ಸಂಘಕ್ಕೆ ನೇಮಿಸಲಾಗಿದ್ದ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ:16.12.2004 ರಿಂದ 6 ತಿಂಗಳ ಅವಧಿಗೆ ಅಥವಾ ಸಂಘಕ್ಕೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿದೆ.

ಈ ವಿಸ್ತರಿಸಿದ ಅವಧಿಯೊಳಗೆ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ, ಕಡ್ಡಾಯವಾಗಿ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸಲು ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 808 **ಎಂ.ಪಿ. ಮಂಜುನಾಥ್**

ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

## ENERGY SECRETARIAT

**CORRIGENDUM No. EN 145 NCE 2005, Bangalore, Dated: 30th May 2005**

In Government Order No. DE 165 NCE 2002 dated 5.3.2003, wherever latitude and longitude appeared as

Latitude - 13'26'30"-27'30"N and
Longitude-76'37'30" 38'-30"E
shall be read as
Latitude -13'23' 44"-13' 30"N and
Longitude-76' 37' 30" - 76 41' 30" E".

By Order and in the Name of the Governor of Karnataka,

P.R. 809

**SURESH B. KRISHNAPPANAVAR**

Under Secretary to Government, Energy Department.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವಿಲಾಸ್ ಎಲ್.ಪೋಳ್, ಎಎಸ್ಐ(ನಿ) ಬೀದರ್ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್ ಜಿಲ್ಲೆ ಇವರ ಆದೇಶ ಸಂಖ್ಯೆ:20/ಡಿಇ/ಬೀ/1999-2001. ಆಪು ಸಂ:537/ಬೀ/2001 ದಿನಾಂಕ:06-08-2001.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು/137/ಈಶಾನ್ಯ ವಲಯ/2001. ಅಪು ಸಂ: 43/ಈವ/2002/275 ದಿನಾಂಕ: 23.01.2002.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:08-04-2002.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/18/2002-03.ದಿನಾಂಕ:17-10-2002.
5. ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೀದರ್ ಜಿಲ್ಲೆ ಇವರ ಪತ್ರ ಸಂಖ್ಯೆ:20/ಡಿಇ/1999/3132 ದಿನಾಂಕ:26.03.2005.

**ಪ್ರಸ್ತಾವನೆ:**

ಶ್ರೀ ವಿಲಾಸ್ ಎಲ್.ಪೋಳ್, ಎಎಸ್ಐ (ನಿಸ್ತಂತು) ಜಿಲ್ಲಾ ನಿಯಂತ್ರಣ ಕೋಣೆ, ಬೀದರ್ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡುವಳಿ) ನಿಯಮಗಳು 1965ರ ನಿಯಮ 8 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:** ``ನೀವು ದಿನಾಂಕ:02-03-1999 ರಂದು 1300 ಗಂಟೆಯಿಂದ 2000 ಗಂಟೆಯವರೆಗೆ ಕರ್ತವ್ಯವನ್ನು ನಿರ್ವಹಿಸಿ ಹೋಗಿರುವಿರಿ. ನಂತರ ನೀವು ಅದೇ ದಿವಸ 2115 ಗಂಟೆಗೆ ಮದ್ಯಪಾನ ಸೇವನೆ ಮಾಡಿ ಕರ್ತವ್ಯ ಇಲ್ಲದಿದ್ದರೂ ಸಹ ಪೊಲೀಸ್ ಕಂಟ್ರೋಲ್ ರೂಮಿನಲ್ಲಿ ಬಂದು ಕುಳಿತುಕೊಂಡಿರುವುದಲ್ಲದೆ ಆ ಸಮಯದಲ್ಲಿ ಶಂಕರ ಎಚ್-ಸಿ(ನಿ)ರವರು ವಿ.ಎಚ್.ಎಫ್ ಕರ್ತವ್ಯದ ಮೇಲೆ ಹಾಜರಿದ್ದು, ಕರ್ತವ್ಯ ನಿರ್ವಹಿಸುತ್ತಿದ್ದರೂ ಸಹ ನೀವು ಕರ್ತವ್ಯದ ಮೇಲೆ ಇರದೇ ಮದ್ಯಪಾನ ಸೇವನೆ ಸ್ಥಿತಿಯಲ್ಲಿ ವಿ.ಎಚ್.ಎಫ್.ಕರ್ತವ್ಯ ನಿರ್ವಹಿಸುತ್ತಿದ್ದ, ಮುಖ್ಯ ಪೇದೆ ಶಂಕರ ಇವರಿಂದ ಮೈಕ್ರೋಪಾನ ಕಸಿದುಕೊಂಡು, ಪೊಲೀಸ್ ಅಧೀಕ್ಷಕರು ಬೀದರ್ ರವರು ಕೊಡುತ್ತಿದ್ದ ಆದೇಶಗಳನ್ನು ಸ್ವೀಕರಿಸಲಾಗಿದೆ, ಎಂದು ಉತ್ತರಿಸಿ ಅತೀವ ಅಶಿಸ್ತು ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುವಿರಿ.''

ಮೇಲ್ಕಂಡ ಆರೋಪದ ಬಗ್ಗೆ ಇಲಾಖಾ ವಿಚಾರಣೆಯಲ್ಲಿ ಆರೋಪ ಭಾಗಶ:ಸಾಬೀತಾಗಿದೆ ಎಂಬ ವರದಿಯ ಆಧಾರದ ಮೇಲೆ ಶಿಸ್ತು ಪ್ರಾಧಿಕಾರಿ ಹಾಗೂ ಎಸ್‌ಪಿ ಬೀದರ್ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:06-08-2001ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ಒಂದು ವಾರ್ಷಿಕ ವೇತನ ಮುಂಬಡ್ತಿಯನ್ನು ಭವಿಷ್ಯದ ವೇತನ ಮುಂಬಡ್ತಿಗಳಿಗೆ ಪರಿಣಾಮ ಬೀರುವಂತೆ (ಎಫೆಕ್ಟಿಂಗ್) ನಿರಂತರವಾಗಿ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿ, ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಅಂಶಗಳು ಕಂಡು ಬಂದಿಲ್ಲವೆಂದು ಮೇಲ್ಮನವಿ ಪ್ರಾಧಿಕಾರಿ ಹಾಗೂ ಐಜಿಪಿ, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ;(2)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಸಲ್ಲಿಸಿರುತ್ತಾರೆ. ಈ ಪರಿಷ್ಕರಣ ಮೇಲ್ಮನವಿ ದಾಖಲೆಗಳನ್ನು ಪರಿಶೀಲಿಸಿದ ನಂತರ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿದ್ದು, ಕುಡಿದು ಬಂದು, ತಮ್ಮದಲ್ಲದ ಕರ್ತವ್ಯದ ವೇಳೆಯಲ್ಲಿ ಕಚೇರಿಯಲ್ಲಿ ದುರ್ನಡತೆ ಪ್ರದರ್ಶಿಸಿರುವುದಕ್ಕೆ ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆ ಸಮಂಜಸವಾಗಿರುವುದರಿಂದ, ಇದರಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಇರುವುದಿಲ್ಲವೆಂದು ಪರಿಗಣಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 119 ಪೊಸಿಅ 2002 ಬೆಂಗಳೂರು, ದಿನಾಂಕ: 01ನೇ ಜೂನ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿಲಾಸ್.ಎಲ್.ಪೋಳ್ ಎಎಸ್ಐ (ನಿಸ್ತಂತು) ಪೊಲೀಸ್ ಕಂಟ್ರೋಲ್ ರೂಂ ಬೀದರ್ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 810

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಆನಂದ ಪ್ರಸಾದ, ಸಿಪಿಸಿ 1297, ಗುಲ್ಬರ್ಗಾ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಪಿಆರ್/292/2000, ಓಬಿ ಸಂಖ್ಯೆ:3419/2000. ದಿನಾಂಕ:20-10-2000.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಐಜಿಪಿ, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು/78/ಈವ/2000, ಆಪು ಸಂಖ್ಯೆ:317/ಈವ/2001 ದಿನಾಂಕ:13-06-2001,
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:04-08-2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/71/2003-04.ದಿನಾಂಕ:23-03-2005.

**ಪ್ರಸ್ತಾವನೆ:**

ಶ್ರೀ ಆನಂದ ಪ್ರಸಾದ್, ಪೇದೆ 1297, ರಾಘವೇಂದ್ರ ನಗರ, ಪೊಲೀಸ್ ಠಾಣೆ, ಗುಲ್ಬರ್ಗಾ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ಧ ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡುವಳಿ) ನಿಯಮಾವಳಿ 1965ರ ನಿಯಮ 7 ರಡಿಯಲ್ಲಿ ದೋಷರೋಪಣೆ ಪತ್ರ ಹೊರಡಿಸಲಾಗಿತ್ತು.

**ದೋಷಾರೋಪಣೆ:** ``ದಿನಾಂಕ:22-04-2000ರಂದು ಸಾಯಂಕಾಲ ಶ್ರೀಮತಿ ದುರ್ಗಾ ಗಂಡ ಸುರೇಶ್ ರವರಿಗೆ ಕುಡಿದ ಅಮಲಿನಲ್ಲಿ ಬೈದು ಹಾಗೂ ಊರ್ಮಿಳಾಗೆ ಹೊಡೆದು ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿದ ಬಗ್ಗೆ.''

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರಿಂದ ವಿವರಣೆ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಗುಲಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:20-10-2000ರ ತಮ್ಮ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 3 ತಿಂಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿ, ಸದರಿ ಮೇಲ್ಮನವಿಯನ್ನು ಪರಿಶೀಲಿಸಿ,ಸದರಿ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಅಂಶಗಳೇನೂ ಇಲ್ಲದಿರುವುದರಿಂದ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಎತ್ತಿ ಹಿಡಿದು, ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ;(2)ರಲ್ಲಿ ಓದಲಾದ ದಿನಾಂಕ:13-06-2001 ತಮ್ಮ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಹಾಗೂ ಸಂಬಂಧಪಟ್ಟ ದಾಖಲಾತಿ, ಕಂಡಿಕಾವಾರು ಷರಾಗಳನ್ನು ಪರಿಶೀಲಿಸಿದ ನಂತರ, ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕುಡಿದು ಬಂದು, ಅಮಲಿನಲ್ಲಿ ದುರ್ನಡತೆ ಪ್ರದರ್ಶಿಸಿದ್ದ ಕಾರಣ, ಶಿಸ್ತು ಪ್ರಾಧಿಕಾರ ಲಘು ಶಿಕ್ಷೆ ವಿಧಿಸಿದ್ದು, ಅರ್ಜಿದಾರರು ಇನ್ನು ಮುಂದೆ ತಮ್ಮ ತಪ್ಪನ್ನು ತಿದ್ದಿಕೊಳ್ಳಲು ಅವಕಾಶ ಮಾಡಿಕೊಟ್ಟಿರುವ ಹಿನ್ನೆಲೆಯಲ್ಲಿ, ಶಿಸ್ತು ಪ್ರಾಧಿಕಾರದ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯವಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 165 ಪೊಸಿಅ 2003 ಬೆಂಗಳೂರು, ದಿನಾಂಕ: 01ನೇ ಜೂನ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆನಂದ ಪ್ರಸಾದ, ಸಿಪಿಸಿ 1297, ಗುಲ್ಬರ್ಗಾ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 811

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ. ಮಂಜುನಾಥ, ಪಿಸಿ 811, ಕೆ.ಆರ್.ಪುರಂ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿದ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪೂರ್ವ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ/ ಆರ್-7/38/2001/ ದಿನಾಂಕ:11-01-2002.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮಿಷನರ್, (ಆಡಳಿತ ಮತ್ತು ಸಿಎಆರ್) ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:84/ಅಪೀಲು/2001-02. ದಿನಾಂಕ:18-05-2002, ಓಬಿ ಸಂಖ್ಯೆ: 430/2002.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:25-10-2002.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/74/2002-03.ದಿನಾಂಕ:31-07-2003.

**ಪ್ರಸ್ತಾವನೆ:**

ಶ್ರೀ ಎಂ.ಮಂಜುನಾಥ್,ಪಿಸಿ 8117 ಕೆ.ಆರ್.ಪುರಂ ಪೊಲೀಸ್ ಠಾಣೆ ಬೆಂಗಳೂರು, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ಧ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡುವಳಿ) ನಿಯಮಾವಳಿ 1965ರ ನಿಯಮ 7 ರಡಿ ಕ್ರಮ ಜರುಗಿಸಲಾಗಿದೆ.

**ದೋಷಾರೋಪಣೆ:** ``ದಿನಾಂಕ:30-11-2001 ರಂದು ರಾತ್ರಿ ಕರ್ತವ್ಯದಲ್ಲಿದ್ದ ಕೆ.ಆರ್.ಪುರಂ ಠಾಣೆಯ ಪಿಸಿ 8117 ಮಂಜುನಾಥ ಆದ ನೀವು ವಿಶ್ವನಾಥ ಬಡಾವಣೆಯಲ್ಲಿದ್ದ 5 ಪಾಯಿಂಟ್ ಪುಸ್ತಕಗಳ ಪೈಕಿ ಒಂದು ಪಾಯಿಂಟ್ ಪುಸ್ತಕಕ್ಕೆ ಮಾತ್ರ ಸಹಿ ಹಾಕಿದ್ದು, ಇತರೇ ಪಾಯಿಂಟ್ ಪುಸ್ತಕಗಳಿಗೆ ಸಹಿಹಾಕದೇ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿಯನ್ನು ಪ್ರದರ್ಶಿಸಿರುತ್ತೀರಿ. ಇದರಿಂದ ದಿನಾಂಕ:30-11-01ರಂದು ರಾತ್ರಿ ಸದರಿ ವಿಶ್ವನಾಥ ಬಡಾವಣೆಯಲ್ಲಿ ಶ್ರೀಮತಿ ಲಕ್ಷ್ಮಿ ಎಂಬುವರ ಮನೆಯಲ್ಲಿ ಕಳ್ಳತನವಾಗಿದ್ದು, ನೀವು ಸರಿಯಾಗಿ ಕರ್ತವ್ಯವನ್ನು ನಿರ್ವಹಿಸಿದ್ದರೆ ಕಳ್ಳರು ಎಚ್ಚೆತ್ತುಕೊಂಡು ಕುರಿತು ಕಳ್ಳತನ ಮಾಡುವುದನ್ನು ತಪ್ಪಿಸಬಹುದಾಗಿತ್ತು.''

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರಿಗೆ ನೀಡಿದ ನೋಟೀಸಿಗೆ ಅವರು ನೀಡಿದ ಸಮಜಾಯಿಷಿಯನ್ನೊಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, (ಪೂರ್ವ ವಿಭಾಗ)ಬೆಂಗಳೂರು ಇವರು, ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:11:01:2002ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಗಳ ಕಾಲ ಮುಂದಿನ ವಾರ್ಷಿಕ ಬಡ್ತಿಗೆ ಧಕ್ಕೆ ಆಗದಂತೆ (Not Affecting) ತಡೆಹಿಡಿದು, ದಿನಾಂಕ:06-12-2001 ರಿಂದ 31-12-2001 ರ ವರೆಗಿನ ಅವಧಿಯನ್ನು ಅಮಾನತ್ತಿನ ಅವಧಿಯೆಂದು ಪರಿಗಣಿಸಿ, ಜೀವನಾಧಾರ ಭತ್ಯೆಕ್ಕೆ ಸರಿದೂಗಿಸಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ನಂತರ ಮೇಲ್ಮನವಿಯಲ್ಲಿ ಅವರ ಮೇಲಿನ ಆರೋಪಗಳನ್ನು ಅಲ್ಲಗಳೆಯಲು ಯಾವುದೇ ಪುಷ್ಠಿಕರವಾದ ಅಂಶವನ್ನು ಮಂಡಿಸಿಲ್ಲವೆಂದು ಮನಗಂಡು ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಎತ್ತಿ ಹಿಡಿದು, ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ(2) ರಲ್ಲಿ ಓದಲಾದ ದಿನಾಂಕ:18-05-2002ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿದ್ದು, ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಕಂಡಿಕಾವಾರು ಷರಾಗಳನ್ನು ಪರಿಶೀಲಿಸಿದ ನಂತರ,ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿದ್ದು, ತಮ್ಮ ಬೀಟ್ ಕರ್ತವ್ಯವನ್ನು ಸರಿಯಾಗಿ ಪಾಲಿಸದೆ, ಕರ್ತವ್ಯ ಲೋಪವೆಸಗಿರುವುದು, ಶ್ರೀಮತಿ ಲಕ್ಷ್ಮಿ ಎಂಬುವವರ ಮನೆಯಲ್ಲಿ ಕಳ್ಳತನ ಆಗಿರುವುದು ಸಾಕ್ಷಿ ಆಗಿದೆ. ಈ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರಿ ಲಘು ದಂಡನೆ ವಿಧಿಸಿದ್ದು, ಸರ್ಕಾರ ಇದರಲ್ಲಿ ಹಸ್ತಕ್ಷೇಪ ಮಾಡಲು ಸಕಾರಣಗಳು ಇರುವುದಿಲ್ಲವೆಂದು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 263 ಪೊಸೆಅ 2002 ಬೆಂಗಳೂರು, ದಿನಾಂಕ: 21ನೇ ಮೇ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್(ಶಿಸ್ತು ನಡವಳಿ) ನಿಯಮಾವಳಿ 1965 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ಮಂಜುನಾಥ್,ಪಿಸಿ,8117, ಕೆ.ಆರ್.ಪುರಂ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸರ್ಕಾರವು ತಿರಸ್ಕರಿಸಿದೆ.

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 812

**ಆರ್. ರಂಗಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಶೆಟ್ಟಿಗೌಡ, ಆರ್‌ಪಿಸಿ 570 ಎಸ್‌ಬಿಸಿ ರೈಲ್ವೆ ಪೊಲೀಸ್ ಠಾಣೆ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕಾಧೀಕ್ಷಕರು, ರೈಲ್ವೇಸ್, ಬೆಂಗಳೂರು ಇವರ ಆದೇಶ ಸಂಖ್ಯೆ:/ಡಿಇ/25/2000-01. ದಿನಾಂಕ:17-01-2002.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಐಜಿಪಿ, ರೈಲ್ವೇಸ್, ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ/ಮೆ/23/2001-02 ದಿನಾಂಕ:12-03-2003.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10-06-2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/ 36/2003-04 ದಿನಾಂಕ:14-11-2003.

**ಪ್ರಸ್ತಾವನೆ:**

ಶ್ರೀ ಶೆಟ್ಟಿಗೌಡ, ಪಿಸಿ 570, ರೈಲ್ವೆ ಪೊಲೀಸ್, ಬೆಂಗಳೂರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ದ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡುವಳಿ) ನಿಯಮಗಳು 1965ರ ನಿಯಮ 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:** ``1. ದಿನಾಂಕ:04-01-2001 ರಂದು ಎರಡನೇ ಪಾಳಿಯ ವೇದಿಕೆ ಕರ್ತವ್ಯದಲ್ಲಿದ್ದಾಗ, ಶ್ರೀ ಎಸ್.ನಟರಾಜ್ ಎಂಬುವವವರ ಲಗ್ಗೇಜ್‌ಗಳನ್ನು ಚೆಕ್ ಮಾಡಿ,ಹೆಚ್ಚು ಲಗ್ಗೇಜ್‌ಗಳನ್ನು ಸಾಗಿಸುತ್ತಿರುವಿರೆಂದು ಹೆದರಿಸಿ ಒತ್ತಾಯ ಪೂರ್ವಕವಾಗಿ ಅವರಿಂದ ರೂ.100/- ಗಳನ್ನು ಲಂಚವನ್ನಾಗಿ ಪಡೆದು ನಿಮ್ಮ ಕರ್ತವ್ಯದಲ್ಲಿ ತೀವ್ರ ಅಶಿಸ್ತು ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುವ ಆರೋಪ''

2. ಈ ಕಚೇರಿಯಿಂದ ಆರೋಪದ ವರದಿ ತಿಳಿದಾಗ, ದಾವಣಗೆರೆಗೆ ಮತ್ತು ಅವರ ಸ್ವಂತ ಊರಿಗೆ ಹೋಗಿ ಫಿರ್ಯಾದುದಾರರನ್ನು ಫಿರ್ಯಾದನ್ನು ವಾಪಸ್ಸು ಪಡೆಯುವಂತೆ ಒತ್ತಡ ತಂದಿರುವ ಆರೋಪ.''

ಮೇಲ್ಕಂಡ ಆರೋಪದ ಬಗ್ಗೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಅಧೀಕ್ಷಕರು, ರೈಲ್ವೇಸ್, ಬೆಂಗಳೂರು ಇವರು ಮೇಲೆ ಕ್ರಮ

ಸಂಖ್ಯೆ:(1)ರಲ್ಲಿ ಓದಲಾದ ತಮ್ಮ ಆದೇಶ ದಿನಾಂಕ:17-01-2002 ರಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು 2 ವರ್ಷಕಾಲ ಮುಂದಿನ ವೇತನ ಬಡ್ತಿಗೆ ಧಕ್ಕೆ ಆಗದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಐಜಿಪಿ ರೈಲ್ವೇಸ್, ಬೆಂಗಳೂರು ಇವರು ಮೇಲ್ಮನವಿದಾರರ ಸೇವೆಯನ್ನು ಪರಿಗಣಿಸಿ, ತಮ್ಮ ಕರ್ತವ್ಯ ನಿರ್ವಹಣೆ ಸುಧಾರಿಸಿಕೊಳ್ಳಲು ಒಂದು ಅವಕಾಶ ಕಲ್ಪಿಸಿ ಕೊಡುವ ಉದ್ದೇಶದಿಂದ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ, ಇವರ ಶಿಕ್ಷೆಯನ್ನು ಕಡಿಮೆ ಮಾಡಿ, ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗೆ ಕುಂದು ತರದಂತೆ ಒಂದು ವರ್ಷಕಾಲ ತಡೆಹಿಡಿಯುವ ದಂಡನೆಯನ್ನು ಮೇಲೆ ಕ್ರಮ ಸಂಖ್ಯೆ;(2)ರಲ್ಲಿ ಓದಲಾದ ದಿನಾಂಕ:12-03-2003ರ ಆದೇಶದಲ್ಲಿ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಅರ್ಜಿದಾರರು ಪರಿಷ್ಕರಣ ಮೇಲ್ಮನವಿ ಅರ್ಜಿ ಸಲ್ಲಿಸಿರುತ್ತಾರೆ. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ, ಇಲಾಖಾ ವಿಚಾರಣೆ ದಾಖಲೆಗಳನ್ನು ಹಾಗೂ ಕಂಡಿಕಾವಾರು ಷರಾಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಮುಖ್ಯ ಪೇದೆಯೊಬ್ಬರು ಅಕೃತ್ಯದಲ್ಲಿ ಪಾಲ್ಗೊಂಡಿದ್ದು ಗೊತ್ತಿದ್ದರೂ, ಮೇಲಾಧಿಕಾರಿಗಳ ಗಮನಕ್ಕೆ ತರದೆ ಇರುವುದೂ ಸಹ ಅಪರಾಧವೇ ಆಗಿರುತ್ತದೆ. ಆದರೂ, ಮೇಲ್ಮನವಿ ಪ್ರಾಧಿಕಾರವು, ಅರ್ಜಿದಾರರ ಸೇವೆಯನ್ನು ಪರಿಗಣಿಸಿ ಶಿಸ್ತು ಪ್ರಾಧಿಕಾರ ವಿಧಿಸಿರುವ ಶಿಕ್ಷೆಯನ್ನು ಕಡಿಮೆ ಮಾಡಿರುವ ಕಾರಣ, ಇದರಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 28 ಪೊಸಿಅ 2005 ಬೆಂಗಳೂರು, ದಿನಾಂಕ: 20ನೇ ಮೇ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶೆಟ್ಟಿಗೌಡ ಆರ್‌ಪಿಸಿ 570, ಎಸ್‌ಬಿಸಿ ರೈಲ್ವೆ ಪೋಲೀಸ್ ಠಾಣೆ ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 813

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಹೆಚ್.ಶ್ರೀನಿವಾಸ, ಪಿಎಸ್‌ಐ, ತುಮಕೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಐಜಿಪಿ,ಕೇಂದ್ರ ವಲಯ ಬೆಂಗಳೂರು ಇವರ ಆದೇಶ ಸಂಖ್ಯೆ:ಪನ್ರಿ/ಡಿಇ/23/2001-02 ಓಬಿ - 11 2002-03 ದಿನಾಂಕ:16-04-2002
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/6/14/2002-03. ದಿನಾಂಕ:25-04-2003,
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:06-06-2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/40/2003-04 ದಿನಾಂಕ:05-03-2004.

**ಪ್ರಸ್ತಾವನೆ:**

ಶ್ರೀ ಹೆಚ್.ಶ್ರೀನಿವಾಸ್, ಪಿಎಸ್‌ಐ, ತುಮಕೂರು ಜಿಲ್ಲೆ ಇವರ ವಿರುದ್ಧ,(ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡುವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:** ``1. ಕ್ಯಾಕ್ಸಂದ್ರ ಪೊಲೀಸ್ ಠಾಣೆ ಮೊ.ಸಂಖ್ಯೆ:29:2000 ಕಲಂ 143-341-149 ಐಪಿಸಿ. ಪ್ರಕರಣದಲ್ಲಿ ಎ.ಪಿ.ಪಿ.ಪರಿಶೀಲನೆಗಾಗಿ ಸಲ್ಲಿಸಿದ್ದ ಚಾರ್ಜ್ ಶೀಟ್‌ನಲ್ಲಿ ಆರೋಪಿಗಳಿಲ್ಲದ ಅನೇಕ ನ್ಯಾಯವಾದಿಗಳ ಹೆಸರುಗಳನ್ನು ಅದೇ ಪ್ರಕರಣದ ಎಫ್‌ಐಆರ್ ನಲ್ಲಿ ಒಬ್ಬ ಆರೋಪಿಯಾಗಿರುವ ನ್ಯಾಯವಾದಿ ಲೋಕೇಶ್ ಗಾಂಧಿ ಇವರ ಒತ್ತಡದಿಂದ ಸೇರಿಸಿ ಕರ್ತವ್ಯ ಲೋಪವೆಸಗಿರುತ್ತೀರಿ.

2. ಪ್ರಕರಣದ ತನಿಖಾ ಕಾಲದಲ್ಲಿ ಪ್ರಕರಣದ ಕಡತದಲ್ಲಿ ತೋರಿಸಿರುವಂತೆ ಅಧಿಕಾರಿಗಳ ಹೇಳಿಕೆಗಳನ್ನು ಆಯಾಯ ದಿನಾಂಕಗಳಿಂದ ಮಾಡದೇ ಠಾಣೆಯಲ್ಲಿ ಬರೆದು ಅತೀವ ಕರ್ತವ್ಯಲೋಪ ಮಾಡಿರುವುದು.''

ಮೇಲ್ಕಂಡ ಆರೋಪದ ವಿರುದ್ಧ ಇಲಾಖಾ ವಿಚಾರಣೆ ನಡೆಸಿ, ಅರ್ಜಿದಾರರ ವಿರುದ್ಧ ಆರೋಪಗಳು ಸಾಬೀತಾಗಿ ರುವುದಿಲ್ಲವೆಂಬ ವರದಿಯನ್ನು ಒಪ್ಪದೇ, ಅರ್ಜಿದಾರರ ವಿರುದ್ಧ ಆರೋಪವು ಗುರುತರವಾಗಿರುವುದಿಲ್ಲರಿಂದ, ಇಲಾಖಾ ವಿಚಾರಣೆ ಕಡತ ಹಾಗೂ ಅಂತಿಮ ವರದಿಯನ್ನು ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ ಇವರಿಗೆ ಕಳುಹಿಸಿ, ಅಂತಿಮ ಆದೇಶವನ್ನು ಹೊರಡಿಸುವಂತೆ ಪೊಲೀಸ್ ಆಧೀಕ್ಷಕರು, ತುಮಕೂರು ಜಿಲ್ಲೆ ಇವರು ದಿನಾಂಕ:12-04-2001ರ ಆದೇಶದಲ್ಲಿ ಕೋರಿರುತ್ತಾರೆ. ಐಜಿಪಿ, ಕೇಂದ್ರ ವಲಯ ಇವರು ಇಲಾಖಾ ವಿಚಾರಣೆ ದಾಖಲಾತಿಗಳನ್ನು ಪರಿಶೀಲಿಸಿ, ಆರೋಪವು ದೃಢಪಟ್ಟಿರುವುದರಿಂದ ಹಾಗೂ ಅರ್ಜಿದಾರರ ಯಾವ ಅಂಶವು ಪರಿಗಣಾರ್ಹವಲ್ಲ ಎಂದು ಭಾವಿಸಿ, ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಮುಂದೂಡಿ ದಿನಾಂಕ:16-04-2002ರ ಆದೇಶದಲ್ಲಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ದಿನಾಂಕ:25-04-2003ರ ತಮ್ಮ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಾದಾಂಶಗಳಲ್ಲಿ ಯಾವುದೇ ತರ್ಕಬದ್ಧ ವಾದವಿಲ್ಲದಿರುವ ಕಾರಣ ಹಾಗೂ ತಮ್ಮ ವಿರುದ್ದದ ಆರೋಪವನ್ನು ಅಲ್ಲಗಳೆಯುವಂತಹ ಯಾವುದೇ ವಿವಾದಾಂಶಗಳನ್ನು ಹೊಂದಿರುವುದಿಲ್ಲವಾದ ಕಾರಣ, ಮತ್ತು ಶಿಸ್ತಿನ ಇಲಾಖೆಯಲ್ಲಿದ್ದು, ಬೇಜವಾಬ್ದಾರಿತನ, ನಿರ್ಲಕ್ಷತೆ ಹಾಗೂ ಅತೀವ ದುರ್ನಡತೆ ಪ್ರದರ್ಶಿಸಿದ್ದರೂ, ಅರ್ಜಿದಾರರು ತಮ್ಮ ತಪ್ಪನ್ನು ತಿದ್ದಿಕೊಳ್ಳಲು, ಮುಂದಿನ ದಿನಗಳಲ್ಲಿ ಸುಧಾರಿಸಿಕೊಳ್ಳಲು, ಅವರ ಸೇವಾ ಅವಧಿಯನ್ನು ಪರಿಗಣಿಸಿ, ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮೇಲ್ಮನವಿ ಪ್ರಾಧಿಕಾರಿ ಮಾರ್ಪಡಿಸಿರುತ್ತಾರೆ. ಈ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 94 ಪೊಸಿಅ 2003 ಬೆಂಗಳೂರು, ದಿನಾಂಕ: 18ನೇ ಮೇ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಶ್ರೀನಿವಾಸ್, ಪಿಎಸ್ಐ ಕ್ಯಾಕಸಂದ್ರ ಪೊಲೀಸ್ ಠಾಣೆ ತುಮಕೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 814

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## URBAN DEVELOPMENT SECRETARIAT

**Sub:** Technical collaboration with the organization of Comptroller and Auditor General of India for Audit of Urban Local Bodies in Karnataka

**Read:**
1. Government Order No. UDD 65 SFC 2002 dated 28.2.2003
2. D.O. No.Pr.AG(Audit-I)SAR-ZP/A-1/2004-05/44 dated 24.5.04 from Accountant General, Bangalore

**Preamble:**

In the Government Order dated 28.2.2003 read at (1) above, detailed instruction/guidelines regarding utilization of Budget provisions to Local Bodies has been issued on the basis of recommendations made by Eleventh Finance Commission, Government of India.

In the D.O. letter dated 24.5.2004 referred at (2) above, the Principal Accountant General has requested to issue necessary orders for entrustment of Technical guidance and supervision of audit arrangement of local bodies to the Comptroller and Auditor General of India.

The Auditor and Controller of State Accounts is responsible for auditing and certifying the accounts of Urban Local Bodies in the State. The Principal Accountant General (Civil & Commercial Audit), Karnataka has requested the Government to entrust to Comptroller and Auditor General of India the Technical Guidance and Collaboration of audit of Urban Local Bodies under section 21 of the C&AG's (Duties, Powers and Conditions of Services) Act.

The matter has been examined by the Government. The Government feels that there could be a technical collaboration between the Auditor/Controller of State Accounts and the Comptroller and Auditor General of India represented by Principal AG (Civil & Commercial Audit) Karnataka for improving the quality of audit of Urban Local Bodies. Hence the following Order.

**Government Order No.UDD 98 AHD 2004, Bangalore, Dated 30th May 2005**

1) The scope of the technical collaboration with the C & AG of India i.e. by the Principal AG(Civil & Commercial Audit), Karnataka would be broadly as follows:-

   a) The Audit methodology and procedures for audit of Urban Local Bodies by the Auditor/Controller of State Accounts will be worked out in consultation with Principal AG(Civil & Commercial Audit)and such audit methodology and procedures shall be consistent with the Mysore Local fund Audit Manual and its amendment from time to time as also shall be consistent with the double entry accrual accounting system, as and when such system is introduced by the state.

   b) The nature, extent and scope of audit including form and contents of the report of Auditor/Controller of State Accounts on the Urban Local Bodies accounts will be decided in consultation with the Principal AG(Civil & Commercial Audit)Karnataka.

   c) The Auditor/Controller of State Accounts will develop in consultation with Principal AG(Civil & Commercial Audit) Karnataka a system of internal control regarding audit of Urban Local Bodies.

d) The Auditor/Controller of State Accounts will prepare an annual audit plan and intimate to Principal AG(Civil & Commercial Audit) in the month of March for the Audit to be conducted in financial year beginning next.
e) Principal AG(Civil & Commercial Audit) would conduct test check of some of the Urban Local Bodies audited by the Auditor/Controller of State Accounts on a select and percentage basis (10%).
f) The report of the test check conducted by Principal AG(Civil & Commercial Audit)Karnataka will be sent to the Auditor/Controller of State Accounts for further processing under Karnataka Municipality Act or Karnataka Municipal Corporation Act. The Auditor/Controller of State Accounts will ensure compliance of such paras in the test check report in the same manner as if these are his own reports.
g) Principal AG (Civil & Commercial Audit)Karnataka will give suggestions regarding quality, timeliness and certification of accounts by the Auditor/Controller of State Accounts.
h) The Principal AG (Civil & Commercial Audit)Karnataka and the Controller of State Accounts will jointly work for improving the quality of audit. Principal AG(Civil & Commercial Audit)Karnataka will issue suggestions and can call for such reports from Auditor/Controller of State Accounts as would be required for improving the quality of audit.
i) The important comments of the Principal AG(Civil & Commercial Audit)Karnataka be sought to the State Government for further action in accordance with the provisions of Karnataka Municipality Act and Karnataka Municipal Corporation Act.

2. Training programme and content for the staff of Auditor/Controller of State Accounts will be drawn up in consultation with Principal AG(Civil & Commercial Audit)Karnataka and Principal Accountant Audit.
3. No fee will be levied by the Principal Accountant General for this Technical Collaboration or any guidance issued by him in pursuance of the technical collaboration.
4. This collaboration will be for a period of five years from financial year 2005-06. Its extension beyond five years will be reviewed at the end of the fifth year.

By order and in the name of the Governor of Karnataka

**S.J. SAMPATHKUMAR**

Under Secretary to Government,

Urban Development Department.

P.R. 815

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ವಿಷಯ:** ಶ್ರೀ ಕೆ. ರಾಜೇಂದ್ರ, ಪೀಠಾಧಿಕಾರಿ, ಆಹಾರ-3 ಶಾಖೆ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಅವರ ಅಮಾನತ್ತಿನ ಆದೇಶವನ್ನು ಹಿಂಪಡೆಯುವ ಬಗ್ಗೆ - ಆದೇಶ.

**ಓದಲಾಗಿದೆ:**

1. ಶ್ರೀ ಕೆ. ರಾಜೇಂದ್ರ, ಪೀಠಾಧಿಕಾರಿ, ಆಹಾರ-3 ಶಾಖೆ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಇವರನ್ನು ದಿನಾಂಕ: 23.4.2005ರ ಸರ್ಕಾರದ ಆದೇಶ ಸಂಖ್ಯೆ:ಆನಾಸ 110 ಇಭತ 2005ರನ್ವಯ ಪೂರ್ವಾನುಮತಿ ಪಡೆಯದೆ ಮತ್ತು ರಜೆ ಮಂಜೂರಾತಿ ಪಡೆಯದೆ ಕಚೇರಿಗೆ ಅನಧಿಕೃತ ಗೈರು ಹಾಜರಿಯಾಗಿದ್ದರಿಂದ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.
2. ಶ್ರೀ ಕೆ. ರಾಜೇಂದ್ರ, ಪೀಠಾಧಿಕಾರಿ, ಆಹಾರ-3 ಶಾಖೆ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆರವರು ದಿನಾಂಕ:26.5.2005ರಂದು ಪ್ರಧಾನ ಕಾರ್ಯದರ್ಶಿ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆರವರಿಗೆ ಸಲ್ಲಿಸಿದ ಮನವಿ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ಶ್ರೀ ಕೆ. ರಾಜೇಂದ್ರ, ಪೀಠಾಧಿಕಾರಿ, ಆಹಾರ-3 ಶಾಖೆ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಇವರು ದಿನಾಂಕ: 6.5.2005 ರಿಂದ 31.5.2005ರವರೆಗೆ 26 ದಿನಗಳ ಪರಿವರ್ತಿತ ರಜೆ ಅರ್ಜಿಯನ್ನು ಹಾಗೂ ಗಳಿಕೆ ರಜೆಯನ್ನು ಮಂಜೂರು ಮಾಡಲು ಅರ್ಜಿ ಸಲ್ಲಿಸಿದ್ದರು. ಆದರೆ ಸದರಿ ರಜೆ ಅರ್ಜಿಯನ್ನು ಮಂಜೂರು ಮಾಡಿಸಿಕೊಳ್ಳದೆ, ಸದರಿಯವರು ಪೂರ್ವಾನುಮತಿ ಪಡೆಯದೆ ಕಚೇರಿಗೆ ಅನಧಿಕೃತ ಗೈರು ಹಾಜರಿಯಾಗಿರುವುದರಿಂದ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಶಾಖೆಯ ಕೆಲಸ ಕಾರ್ಯಗಳಿಗೆ ತೊಂದರೆ ಉಂಟಾಗಿರುವುದರಿಂದ ಕೆಲಸಕ್ಕೆ ಹಾಜರಾಗಲು ರಿ-ಕಾಲ್ ನೋಟೀಸ್ ನೀಡಲಾಗಿತ್ತು. ಸದರಿಯವರು ಯಾವುದಕ್ಕೂ ಸ್ಪಂದಿಸದೇ ಇದ್ದುದರಿಂದ ಶ್ರೀ ಕೆ. ರಾಜೇಂದ್ರ, ಪೀಠಾಧಿಕಾರಿ, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಮೇಲೆ ಓದಿದ (2)ರಲ್ಲಿ ಶ್ರೀ ಕೆ. ರಾಜೇಂದ್ರ, ಪೀಠಾಧಿಕಾರಿ, ಆಹಾರ-3 ಶಾಖೆ, ಇವರು ದಿನಾಂಕ: 26.5.2005ರಂದು ಪ್ರಧಾನ ಕಾರ್ಯದರ್ಶಿಯವರಿಗೆ ಮನವಿ ಸಲ್ಲಿಸಿ ಅಮಾನತ್ತು ಆದೇಶವನ್ನು ಹಿಂದಕ್ಕೆ ಪಡೆಯಲು ಕೋರಿದ್ದರು. ಪ್ರಧಾನ ಕಾರ್ಯದರ್ಶಿಯವರು ಸದರಿ ಮನವಿಯನ್ನು ಪರಿಗಣಿಸಲು ಸೂಚಿಸಿದ್ದರು. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 110 ಇಭತ 2005, ಬೆಂಗಳೂರು, ದಿನಾಂಕ: 3ನೇ ಜೂನ್ 2005**

ಶ್ರೀ ಕೆ. ರಾಜೇಂದ್ರ, ಪೀಠಾಧಿಕಾರಿ, ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ರಜೆ ಮೇಲೆ ತೆರಳುವ ಮೊದಲು ರಜೆ ಅನುಮೋದನೆಯನ್ನು ಮುಂಚಿತವಾಗಿ ಪಡೆದು ನಿಯಮಾನುಸಾರ ರಜೆ ಮೇಲೆ ತೆರಳದೆ ಅನಧಿಕೃತವಾಗಿ ತೆರಳಿ ಅನಂತರ ರಜೆಗೆ ಅರ್ಜಿಕೊಟ್ಟಿರುವುದು

ದುರ್ನಡತೆಯಾಗುವುದರಿಂದ, ಸದರಿಯವರ ಮೇಲಿನ ವಿಚಾರಣೆ ಬಾಕಿಯಿರಿಸಿ ದಿನಾಂಕ:23.4.2005ರಂದು ಹೊರಡಿಸಿದ ಅಮಾನತ್ತಿನ ಆದೇಶವನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957 (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 10(5) (ಗ)ರನ್ವಯ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರದ್ದುಗೊಳಿಸಿ ಆದೇಶಿಸಿದೆ.

ಶ್ರೀ ಕೆ. ರಾಜೇಂದ್ರ, ಪೀಠಾಧಿಕಾರಿ, ಆಹಾರ-3 ಶಾಖೆ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆರವರು ಕೂಡಲೇ ಕಾರ್ಯ ವರದಿ ಮಾಡಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 816

**ಕೌಶಿಕ್ ಮುಖರ್ಜಿ**

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2005-2006ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಒಂದನೇ ಕಂತಿನ ರಾಜ್ಯದ ಪಾಲಿನ ಹಣ ರಾಜ್ಯದ 25 ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡುವ (ಶೇ.25ರಷ್ಟು ಹಂಚಿಕೆ) ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ 17014:--:2005 ಡಿಆರ್‌ಡಿಎ (ಎಸ್‌ಆರ್ ನಂ.15) ದಿನಾಂಕ 13.4.2005.

**ಪ್ರಸ್ತಾವನೆ:**

ಭಾರತ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ರಾಜ್ಯದ ಗುಲ್ಬರ್ಗಾ ಮತ್ತು ಹಾವೇರಿ ಜಿಲ್ಲೆಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಜಿಲ್ಲೆಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಒಂದನೇ ಕಂತಿನ ಹಣ ರೂ.4,43,44,000-00 ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಡಿಆರ್‌ಡಿಎ ಆಡಳಿತ ಯೋಜನೆಯಡಿ ಒಂದನೇ ಕಂತಿನ ಹಣ ರೂ.1,47,77,000-00 ಅನ್ನು 25 ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 6 ಸ್ವಜಯೋ (ಡಿಆರ್‌ಡಿಎ) 2005, ಬೆಂಗಳೂರು, ದಿನಾಂಕ: 30ನೇ ಮೇ 2005**

ರಾಜ್ಯ ಸರ್ಕಾರವು ರಾಜ್ಯದ ಗುಲ್ಬರ್ಗಾ ಮತ್ತು ಹಾವೇರಿ ಜಿಲ್ಲೆಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಒಂದನೇ ಕಂತಿನ ಹಣ ರೂ.1,47,77,000-00 (ರೂ. ಒಂದು ಕೋಟಿ ನಲವತ್ತೇಳು ಲಕ್ಷದ ಎಪ್ಪತ್ತೇಳು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ (ಅನುಬಂಧ ಲಗತ್ತಿಸಿದೆ.)

1999ರ ಡಿಆರ್‌ಡಿಎ ಆಡಳಿತ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-(ಯೋಜನೆ)-2005-2006 (2515-00-196-1-06)ರಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜಡ್‌ಪಿಎ 2003 ದಿನಾಂಕ 8.9.2004ರನ್ವಯ ಜಿಲ್ಲಾಪಂಚಾಯತ್ ನಿಧಿ 1ಕ್ಕೆ ಜಮೆ ಮಾಡಿಕೊಂಡು ಭರಿಸತಕ್ಕದ್ದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದಂತೆ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2005-2006ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ (ಆಡಳಿತ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕಪರಿಶೋಧನಾ ವರದಿಗಳನ್ನು, ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 206 ಪಿಬಿಎಸ್ 05 ದಿನಾಂಕ 27.5.2005 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ 61/05 ದಿನಾಂಕ: 30.5.2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ. ಹಿರೇಮಣಿಯವರ್**

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ.ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಅನುಬಂಧ**

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 6 ಸ್ವಜಯೋ (ಡಿಆರ್‌ಡಿಎ) 2005, ಬೆಂಗಳೂರು, ದಿನಾಂಕ: 30ನೇ ಮೇ 2005**

(ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತ್ ಹೆಸರು | ಜಿಲ್ಲಾ ಪಂಚಾಯತ್ ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಮೊದಲನೇ ಕಂತು | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತು |
|---|---|---|---|---|---|
| 1. | ಬೆಂಗಳೂರು ನಗರ | 401 | 0100ZZ8001 | 15,45,000 | 5,15,000 |

(ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತ್ ಹೆಸರು | ಜಿಲ್ಲಾ ಪಂಚಾಯತ್ ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಮೊದಲನೇ ಕಂತು | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತು |
|---|---|---|---|---|---|
| 2. | ಬೆಂಗಳೂರು (ಗ್ರಾ) | 402 | 0300ZZ8001 | 19,15,000 | 6,38,000 |
| 3. | ಬಾಗಲಕೋಟೆ | 461 | 2900ZZ0001 | 19,15,000 | 6,38,000 |
| 4. | ಬೆಳಗಾಂ | 413 | 2200ZZ0002 | 19,15,000 | 6,38,000 |
| 5. | ಬಳ್ಳಾರಿ | 418 | 3400ZZ0001 | 19,15,000 | 6,38,000 |
| 6. | ಬೀದರ್ | 419 | 3800ZZ5701 | 15,45,000 | 5,15,000 |
| 7. | ಬಿಜಾಪುರ | 414 | 2800ZZ9152 | 15,45,000 | 5,15,000 |
| 8. | ಚಾಮರಾಜನಗರ | 456 | 1000ZZ0001 | 15,45,000 | 5,15,000 |
| 9. | ಚಿಕ್ಕಮಗಳೂರು | 408 | 1800ZZ0017 | 19,15,000 | 6,38,000 |
| 10. | ಚಿತ್ರದುರ್ಗ | 403 | 1600ZZ0001 | 19,15,000 | 6,38,000 |
| 11. | ದಾವಣಗೆರೆ | 451 | 1700ZZ0002 | 19,15,000 | 6,38,000 |
| 12. | ದ.ಕನ್ನಡ | 409 | 1900ZZ0047 | 15,45,000 | 5,15,000 |
| 13. | ಧಾರವಾಡ | 415 | 2500ZZ8798 | 15,45,000 | 5,15,000 |
| 14. | ಗದಗ್ | 462 | 2600ZZ0001 | 15,45,000 | 5,15,000 |
| 15. | ಹಾಸನ | 410 | 1300ZZ0003 | 19,15,000 | 6,38,000 |
| 16. | ಕೊಡಗು | 411 | 1200ZZ0001 | 15,45,000 | 5,15,000 |
| 17. | ಕೋಲಾರ | 404 | 0700ZZ6002 | 21,84,000 | 7,28,000 |
| 18. | ಕೊಪ್ಪಳ | 466 | 1500ZZ0010 | 15,45,000 | 5,15,000 |
| 19. | ಮಂಡ್ಯ | 412 | 1100ZZ0001 | 19,15,000 | 6,38,000 |
| 20. | ಮೈಸೂರು | 407 | 0900ZZ0001 | 19,15,000 | 6,38,000 |
| 21. | ರಾಯಚೂರು | 420 | 3600ZZ0001 | 15,45,000 | 5,15,000 |
| 22. | ಶಿವಮೊಗ್ಗ | 405 | 1400ZZ0002 | 19,15,000 | 6,38,000 |
| 23. | ತುಮಕೂರು | 406 | 0800ZZ0001 | 19,15,000 | 6,38,000 |
| 24. | ಉಡುಪಿ | 457 | 2000ZZ0001 | 15,45,000 | 5,15,000 |
| 25. | ಉ.ಕನ್ನಡ | 416 | 3000ZZ0080 | 21,85,000 | 7,28,000 |
| | | | ಒಟ್ಟು | **4,43,44,000** | **1,47,77,000** |

**ಜಿ.ಬಿ. ಹಿರೇಮಣಿಯವರ್**

ಪಿ.ಆರ್. 817

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ.ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:-** ಶ್ರೀ ಜಿ. ಕೃಷ್ಣಮೂರ್ತಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಯಲಹಂಕ, ಉಪ ನೋಂದಣಿ ಕಛೇರಿ, ಬೆಂಗಳೂರು ನಗರ ಜಿಲ್ಲೆ ಹಾಗೂ ಹಾಲೀ ಉಪ ನೋಂದಣಿ ಕಛೇರಿ, ತುಮಕೂರು, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ನೀಡುವ ಕುರಿತು.

**ಉಲ್ಲೇಖ:-**
1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ರವರ ಪತ್ರ ಸಂಖ್ಯೆ:ಇವಿ(2)-15/2002-03, ದಿನಾಂಕ:14-11-2002.
2. ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂ.ಇ. 57 ಮುನೋಸೇ(2) 2002,ದಿನಾಂಕ:20-1-2003.
3. ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂ.ಇ. 57 ಮುನೋಸೇ(2) 2002, ದಿನಾಂಕ:20-2-2004.
4. ಪೋಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ) ಸಿಟಿ/ಕ್ರೈಂ.35/2002, ದಿನಾಂಕ:18-8-03.
5. ಸರ್ಕಾರಿ ಆದೇಶ ಸಂಖ್ಯೆ:ಕಂ.ಇ. 49 ಮುನೋಸೇ(2) 2003,ದಿನಾಂಕ:2-8-2004.
6. ಪೋಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ) ಸಿಟಿ/ಕ್ರೈಂ.35/2002, ದಿನಾಂಕ:11-02-05.

**ಪ್ರಸ್ತಾವನೆ:-**

ಮೇಲೆ(1)ರಲ್ಲಿ ಓದಲಾದ ದಿನಾಂಕ 14-11-2002ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ರವರು ಪೋಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಅವರ ದಿನಾಂಕ:31.10.2002ರ ಪತ್ರದಲ್ಲಿ ಪಿರ್ಯಾದುದಾರರಾದ ಶ್ರೀ ಬಚ್ಚೇಗೌಡ, ಕೆಂಪಾಪುರ, ಹೆಬ್ಬಾಳ, ಬೆಂಗಳೂರು ನಗರ, ಇವರು

ದಿನಾಂಕ:21.10.2002ರಂದು ನೀಡಿದ ದೂರಿನಡಿ ತಮ್ಮ ಪತ್ನಿ ಶ್ರೀಮತಿ ಮಂಜುಳಾ ಹೆಸರಿನಲ್ಲಿ ಕೆಂಪಾಪುರದ ಅಯ್ಯಪ್ಪಸ್ವಾಮಿ ದೇವಸ್ಥಾನದ ರಸ್ತೆಯಲ್ಲಿ ನಿವೇಶನ ಸಂಖ್ಯೆ:34ನ್ನು ನೋಂದಣಿ ಮಾಡಲು ಮೆ:ನಿಡಾ ಎಂಟರ್ ಪ್ರೈಸಸ್ ಮಾಲೀಕರಾದ ಶ್ರೀ ಎಸ್.ಎ. ಷರೀಫ್, ಶರಾವತಿ ಕಾಂಪ್ಲೆಕ್ಸ್, ಯಲಹಂಕ ಇವರ ಬಳಿಗೆ ಲಂಚದ ಹಣವಾದ ರೂ.2,500/- ಗಳನ್ನು ಫಿರ್ಯಾದುದಾರರು ಕೊಟ್ಟಿದ್ದು, ಲಂಚದ ಬಲೆಯನ್ನು ಬೀಸಲಾಗಿದೆ ಎಂದು ವರದಿ ಮಾಡುತ್ತಾ ಶ್ರೀ ಜಿ. ಕೃಷ್ಣಮೂರ್ತಿ, ಹಿರಿಯ ಉಪ ನೋಂದಣಾಧಿಕಾರಿ, ಯಲಹಂಕ ಇವರು ಸುಗಮ ತನಿಖೆಗೆ ಅಡ್ಡಿ ಉಂಟು ಮಾಡಿ ಹಸ್ತಕ್ಷೇಪ ಮಾಡುವ ಹಾಗೂ ಅವರ ವಿರುದ್ಧ ಇರುವ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆ ಇರುವುದರಿಂದ ಇವರನ್ನು ಅಮಾನತ್ತಿನಲ್ಲಿಡುವಂತೆ ಶಿಫಾರಸ್ಸು ಮಾಡಿದ್ದರು.

2. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಮೇಲೆ(2)ರಲ್ಲಿ ಓದಲಾದ ದಿನಾಂಕ: 20-1-2003ರ ಅಧಿಕೃತ ಜ್ಞಾಪನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಶ್ರೀ ಜಿ. ಕೃಷ್ಣಮೂರ್ತಿ ರವರನ್ನು ಯಲಹಂಕ ಉಪ ನೋಂದಣಿ ಕಛೇರಿಯಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕೇಂದ್ರ ಕಛೇರಿಗೆ ವರ್ಗಾಯಿಸಲಾಗಿದ್ದು, ನಂತರ ಮೇಲೆ (3)ರಲ್ಲಿ ಓದಲಾದ ದಿನಾಂಕ:20-2-2004ರ ಸರ್ಕಾರದ ಅಧಿಸೂಚನೆಯಲ್ಲಿ ಇವರನ್ನು ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿ, ಕಾರವಾರ ಇಲ್ಲಿಗೆ ವರ್ಗಾಯಿಸಿ ನೇಮಿಸಲಾಗಿದ್ದು, ನಂತರ ದಿನಾಂಕ 19-5-2005 ರ ಅಧಿಸೂಚನೆ ಸಂಖ್ಯೆ : ಕಂಇ 34 ಮುನೋಸೇ (2) 05 ರಲ್ಲಿ ತುಮಕೂರು ಉಪ ನೋಂದಣಿ ಕಛೇರಿಗೆ ವರ್ಗಾಯಿಸಲಾಗಿದೆ.

3. ಮೇಲೆ-(4)ರಲ್ಲಿ ಓದಲಾದ ದಿನಾಂಕ:18-8-2003ರ ಪತ್ರದಲ್ಲಿ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತರವರು ಶ್ರೀ ಜಿ. ಕೃಷ್ಣಮೂರ್ತಿ, ಹಿರಿಯ ಉಪ ನೋಂದಣಾಧಿಕಾರಿಗಳು, ಉಪ ನೋಂದಣಿ ಕಛೇರಿ, ತುಮಕೂರು ಮತ್ತು ಹಿಂದಿನ ಹಿರಿಯ ಉಪ ನೊಂದಣಾಧಿಕಾರಿ, ಯಲಹಂಕ ಉಪ ನೋಂದಣಿ ಕಛೇರಿ, ಬೆಂಗಳೂರು ನಗರ ಜಿಲ್ಲೆ ಇವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988ರ ಕಲಂ-7,13(1)(ಡಿ), ಜೊತೆಯಲ್ಲಿ ಓದಲಾದ ಕಲಂ-13(2) ರಡಿಯಲ್ಲಿ, ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧ ಕಾಯ್ದೆ 1988 ರ ಕಲಂ 19 (1) (ಡಿ) ರೀತ್ಯಾ ಸರ್ಕಾರದ ಮಂಜೂರಾತಿ ನೀಡಲು ಕೋರಿರುತ್ತಾರೆ.

4. ಸಕ್ಷಮ ಪ್ರಾಧಿಕಾರವು ಪೋಲಿಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ (4) ರ ಪತ್ರ ದಿನಾಂಕ: 18-8-2003 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳ ಜೆರಾಕ್ಸ್ ಪ್ರತಿಗಳನ್ನು ಪರಿಶೀಲಿಸಿದೆ.

i) ಫಿರ್ಯಾದಿ ಶ್ರೀ ಬಚ್ಚೇ ಗೌಡ ಬಿನ್ ನಂಜೇ ಗೌಡ, 47 ವರ್ಷ ವಯಸ್ಸು, ವಾಸ ನಂ. 36, ಅಯ್ಯಪ್ಪಸ್ವಾಮಿ ದೇವಸ್ಥಾನ ರಸ್ತೆ, ಹೆಬ್ಬಾಳ, ಕೆಂಪಾಪುರ, ಬೆಂಗಳೂರು-24 ರವರ ಮನವಿ ದಿನಾಂಕ 21-10-2002 (ಪುಟ 15)

ii) ಪ್ರಥಮ ವರ್ತಮಾನ ವರದಿ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ ಮೊಕದ್ದಮೆ ಸಂಖ್ಯೆ ಲೋನೋ 35/2002 (ಪುಟ 14)

iii) ಪ್ರಾಯೋಗಿಕ ಪಂಚನಾಮೆ ಮತ್ತು ಟ್ರಾಪ್‌ನ ಮಹಜರ್ ದಿನಾಂಕ: 21-10-2002 (ಪುಟ 20-42A)

iv) ರಾಸಾಯನಿಕ ಪರೀಕ್ಷಕರ ವರದಿ ಸಂಖ್ಯೆ CME/LOK/75/2002-03 ದಿ: 27-1-2003 ಮತ್ತು ತಜ್ಞರಿಗೆ ಬರೆದಿದ್ದ ಪತ್ರ ಸಂಖ್ಯೆ ಲೋ.ಮೋ.ಸಂ.35/2002 ದಿ: 24-10-2002 ರ ಮಾದರಿ ಸೀಲಿನ ನಕಲು. (ಪುಟ 54-59)

v) ಕೃತ್ಯ ನಡೆದ ಸ್ಥಳ ನಕಾಶೆ (ಪುಟ 42A)

vi) ಸಾಕ್ಷಿಗಳ ಹೇಳಿಕೆಗಳ ಪ್ರತಿಗಳು (ಪುಟ 75-107)

1.ಶ್ರೀ ಬಚ್ಚೇಗೌಡ ಬಿನ್ ನಂಜೇಗೌಡ, 47 ವರ್ಷ , ವಾಸ ನಂ. 36, ಅಯ್ಯಪ್ಪಸ್ವಾಮಿ ದೇವಸ್ಥಾನ ರಸ್ತೆ, ಹೆಬ್ಬಾಳ, ಕೆಂಪಾಪುರ, ಬೆಂಗಳೂರು-24 (ಫಿರ್ಯಾದುದಾರರು)

2. ಶ್ರೀ ವೈ. ಶಿವಕುಮಾರ್, ದ್ವಿ.ದ.ಸ, ಪ್ರಧಾನ ಇಂಜಿನಿಯರ್ ರವರ ಕಛೇರಿ, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು (ನೆರಳು ಸಾಕ್ಷಿದಾರರು)
3. ಶ್ರೀ ಎ. ರಾಮಯ್ಯ ಬಿನ್ ಅರಸಯ್ಯ, ದ್ವಿ.ದ.ಸ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು (ಮತ್ತೊಬ್ಬ ಸಾಕ್ಷಿದಾರರು)
4. ಶ್ರೀಮತಿ ಮಂಜುಳ ಕೋಂ ಶ್ರೀ ಬಚ್ಚೇಗೌಡ, ವಾಸ ನಂ. 36, ಅಯ್ಯಪ್ಪಸ್ವಾಮಿ ದೇವಸ್ಥಾನ ರಸ್ತೆ, ಹೆಬ್ಬಾಳ, ಕೆಂಪಾಪುರ, ಬೆಂಗಳೂರು-24 (ಫಿರ್ಯಾದುದಾರರ ಪತ್ನಿ)
5. ಶ್ರೀ ಜಿ. ಮುನೇಗೌಡ ಬಿನ್ ಗೂಳಪ್ಪ, 65 ವರ್ಷ, ಕೆಂಪಾಪುರ ಗ್ರಾಮ, ಹೆಚ್.ಎ.ಫಾರಂ ಅಂಚೆ, ಬೆಂಗಳೂರು-24.
6. ಶ್ರೀ ಈರಯ್ಯ, 35 ವರ್ಷ, ಇನ್‌ಛಾರ್ಜ್ ಆಫ್ ಲ್ಯಾಬೊರೇಟರಿ, ನ್ಯಾಷನಲ್ ಕಲರ್ ಲ್ಯಾಬ್, ನಂ. 23, ಕ್ರಿಸೆಂಟ್ ರಸ್ತೆ, ಶಿವಾನಂದ ಸ್ಟೋರ್ಸ್ ಎದುರು, ಬೆಂಗಳೂರು.
7. ಶ್ರೀ ಜಿ.ಜೆ. ಗಾಳಪ್ಪ, ಪೋಲಿಸ್ ಕಾನ್‌ಸ್ಟೇಬಲ್, ಪೊಲೀಸ್ ವಿಭಾಗ, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು.
8. ಶ್ರೀ ರಾಜೇಂದ್ರ ಸಿಂಗ್, ಪೋಲಿಸ್ ಕಾನ್‌ಸ್ಟೇಬಲ್, ಪೊಲೀಸ್ ವಿಭಾಗ, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು.
9. ಶ್ರೀ ರಂಗನಾಥ, ಪೋಲಿಸ್ ಕಾನ್‌ಸ್ಟೇಬಲ್, ಪೊಲೀಸ್ ವಿಭಾಗ, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು.

10. ಶ್ರೀ ಈಶ್ವರಪ್ಪ, ಪೋಲಿಸ್ ಕಾನ್‌ಸ್ಟೇಬಲ್, ಪೊಲೀಸ್ ವಿಭಾಗ, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು.
11. ಶ್ರೀ ಶ್ರೀನಿವಾಸಶೆಟ್ಟಿ, ಹೆಡ್ ಕಾನ್‌ಸ್ಟೇಬಲ್, ಪೊಲೀಸ್ ವಿಭಾಗ, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು.

6. ತನಿಖಾಧಿಕಾರಿಗಳಾದ ಆರಕ್ಷಕ ಉಪ ನಿರೀಕ್ಷಕರು, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ಜಿ. ಕೃಷ್ಣಮೂರ್ತಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಉಪ ನೋಂದಣಾಧಿಕಾರಿಯವರ ಕಛೇರಿ, ಯಲಹಂಕ ಮತ್ತು ಹಾಲಿ ಉಪ ನೋಂದಣಿ ಕಛೇರಿ, ತುಮಕೂರು ಇವರ ವಿರುದ್ಧ ಹಾಗೂ ಇವರಿಗೆ ದುಷ್ಟ ಕಾರ್ಯದಲ್ಲಿ ಸಹಕಾರಿಯಾಗಿದ್ದರೆಂಬ ಆರೋಪದ ಮೇಲೆ ಮೆ:ನೀಡಾ ಎಂಟರ್ ಪ್ರೈಸಸ್, ಸಂಸ್ಥೆಯ ಶ್ರೀ ಷರೀಫ್ ಮತ್ತು ಕುಮಾರಿ:ಶೋಭ ಇವರುಗಳ ವಿರುದ್ಧ ದಂಡಾರ್ಹ ಪ್ರಕರಣವನ್ನು ಆರಕ್ಷಕ ಉಪ ಅಧೀಕ್ಷಕರು, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಗುನ್ನೆ ಸಂಖ್ಯೆ;ಲೋ.ಮೋ 35/2005, ದಿನಾಂಕ: 21-10-2002ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7,13,(1)(ಡಿ) ಜೊತೆಯಲ್ಲಿ ಓದಲಾದ 13(2) ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

7. ಆಪಾದಿತರಾದ ಶ್ರೀ ಜಿ. ಕೃಷ್ಣಮೂರ್ತಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಯಲಹಂಕ, ಇವರು ಫಿರ್ಯಾದುದಾರರಾದ ಶ್ರೀ ಬಚ್ಚೆಗೌಡ, ನಂ.36, ಅಯ್ಯಪ್ಪ ಸ್ವಾಮಿ ದೇವಸ್ಥಾನದ ಹತ್ತಿರ, ಹೆಬ್ಬಾಳ್ ಕೆಂಪಾಪುರ, ಬೆಂಗಳೂರು-24, ಇವರು ಇವರ ಪತ್ನಿ ಶ್ರೀಮತಿ ಮಂಜುಳ ಇವರ ಹೆಸರಿನಲ್ಲಿ ಐಯ್ಯಪ್ಪ ಸ್ವಾಮಿ ದೇವಸ್ಥಾನದ ರಸ್ತೆಯಲ್ಲಿರುವ ನಿವೇಶನ ಸಂಖ್ಯೆ;34, ಖಾತೆ ಸಂಖ್ಯೆ;5/4ರ ವಿಸ್ತೀರ್ಣ, 30X40 ಚ.ಅ. ಅಳತೆಯ ನಿವೇಶನವನ್ನು, ಬೆಂಗಳೂರು-24, ಹೆಚ್.ಎ. ಫಾರಂ ಅಂಚೆ, ಕೆಂಪಾಪುರ ಗ್ರಾಮದಲ್ಲಿ ವಾಸವಾಗಿರುವ ಲೇಟ್ ಶ್ರೀ ಗೂಳಪ್ಪನವರ ಮಗ ಶ್ರೀ ಜಿ. ಮುನೇಗೌಡ. ಇವರಿಂದ ಶುದ್ಧ ಕ್ರಯಕ್ಕೆ ಖರೀದಿಸಿದ್ದು, ಸದರಿ ನಿವೇಶನವನ್ನು ಯಲಹಂಕ ಉಪ ನೋಂದಣಿ ಕಛೇರಿಯಲ್ಲಿ ನೋಂದಾಯಿಸಲು ದಿನಾಂಕ: 21-10-2002ರಂದು ರೂ.2,500/-ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾಧಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಜರುಗಿಸುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯ ಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ, ದಿನಾಂಕ:21.10.2002ರಂದು ಯಲಹಂಕ ಉಪ ನೋಂದಣಾಧಿಕಾರಿಯವರ ಕಛೇರಿಯಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ, ಶ್ರೀ ಜಿ. ಕೃಷ್ಣಮೂರ್ತಿಯವರು ಮೆ: ನೀಡಾ ಎಂಟರ್ ಪ್ರೈಸಸ್ ಸಂಸ್ಥೆಯ ಕೆಲಸಗಾರರಾದ ಕು:ಶೋಭಾರವರನ್ನು ತೋರಿಸಿ ಲಂಚದ ಹಣವನ್ನು ಅವರ ಕೈಯಲ್ಲಿ ಕೊಡುವಂತೆ ತಿಳಿಸಿದ್ದು, ಕು:ಶೋಭಾ ರವರು ಲಂಚದ ಹಣವನ್ನು ಏಜೆಂಟರಾದ ಶ್ರೀ ಎಸ್.ಎ. ಷರೀಫ್ ರವರ ಕೈಯಲ್ಲಿ ಕೊಡಲು ತಿಳಿಸಿರುತ್ತಾರೆ. ಷರೀಫ್ ರವರು ಸಹ ಲಂಚದ ಹಣವನ್ನು ಕೊಡುವಂತೆ ಒತ್ತಾಯಿಸಿ ಅಕ್ರಮ ಸಂಭಾವನೆಯಾದ ರೂ.2,500/- ಹಣವನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಅಧಿಕಾರಿಯ ಪರ ಹಣ ಪಡೆದ ಏಜೆಂಟರಾದ ಶ್ರೀ ಎಸ್.ಎ. ಷರೀಫ್ ರವರ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡೀಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫೀನಾಪ್‌ಥಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾಧಿ ಹಾಗೂ ಆಪಾದಿತ ಸರ್ಕಾರಿ ನೌಕರನ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ, ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯ ರೂ. 2,500/- ಗಳನ್ನು ಮೆ: ನೀಡಾ ಎಂಟರ್ ಪ್ರೈಸಸ್‌ನ ಮಾಲೀಕರಾದ ಶ್ರೀ ಎಸ್.ಎ.ಷರೀಫ್, ರವರ ಟೇಬಲ್ ಡ್ರಾಯರ್‌ನಿಂದ ಪಂಚರ ಸಮಕ್ಷಮ ವಶಪಡಿಸಿಕೊಂಡಿರುವುದು ವರದಿಯಿಂದ ದೃಢಪಟ್ಟಿರುತ್ತದೆ.

8. ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ, 1988ರ ಕಲಂ 7,13(1)(ಡಿ) ಜೊತೆಗೆ ಓದಲಾದ ಕಲಂ 13(2)ರಡಿಯಲ್ಲಿ ಶಿಕ್ಷಾರ್ಹ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ದೃಢಪಟ್ಟಿರುವುದು ಸರ್ಕಾರದ ಮನವರಿಕೆಗೆ ಬಂದಿರುತ್ತದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7,13(1)(ಡಿ) ಜೊತೆಗೆ ಓದಲಾದ ಕಲಂ 13(2)ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯವೆಂದು ಸರ್ಕಾರವು ಮನಗಂಡಿದೆ.

9. ಮೇಲೆ ಓದಲಾದ (5)ರಲ್ಲಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಜಿ. ಕೃಷ್ಣಮೂರ್ತಿ ಇವರನ್ನು ಲಂಚ ನಿರೋಧ ಕಾಯಿದೆ 1988ರ ಕಲಂ 7 ಹಾಗೂ ಕಲಂ13(1)(d) & 13(2)ರಂತೆ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡಿದ್ದು, ಉಲ್ಲೇಖ (6)ರ ಪತ್ರದಲ್ಲಿ ಪೋಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ತೊಡಕುಗಳನ್ನು ಹೊಂದಿದ ಸದರಿ ಆದೇಶದ ಬದಲಾಗಿ ದೋಷರಹಿತ ಆದೇಶ ಹೊರಡಿಸಲು ಕೋರಿದ್ದಾರೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂ.ಇ. 49 ಮುನೋಸೇ (2) 2003, ಬೆಂಗಳೂರು ದಿನಾಂಕ:08ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಕಾರಣಗಳಿಂದಾಗಿ ಸರ್ಕಾರದ ಆದೇಶ ಸಂಖ್ಯೆ:ಕಂಇ 49 ಮುನೋಸೇ(2) 2003, ದಿನಾಂಕ:2-8-2004ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ ಹಾಗೂ ಶ್ರೀ ಜಿ. ಕೃಷ್ಣಮೂರ್ತಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಯಲಹಂಕ, ಬೆಂಗಳೂರು ನಗರ ಜಿಲ್ಲೆ ಹಾಗೂ ಹಾಲೀ ಉಪ ನೋಂದಣಿ ಕಛೇರಿ, ತುಮಕೂರು ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 13(1) 7, 13, (1) (ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರಂತೆ ಸಕ್ಷಮ ನ್ಯಾಯಾಲಯದಲ್ಲಿ ಆಭಿಯೋಜನೆಗೆ ಒಳಪಡಿಸಲು, ಸದರಿ ಕಾಯ್ದೆಯ ಕಲಂ-19ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಮಂಜೂರಾತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿಗಳು 1977ರ ಅಡಿಯಲ್ಲಿ ಈ ಮೇಲ್ಕಂಡ ಆದೇಶವನ್ನು ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 08-06-2005 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

ಪಿ.ಆರ್. 818

**ಎಂ.ಪಿ. ಮಂಜುನಾಥ್**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತು ಮುದ್ರಾಂಕ)

**ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ**

**ವಿಷಯ:** ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್ ಸಲಹಾ ಸಮಿತಿ ರಚನೆ ಕುರಿತು.

**ಓದಲಾಗಿದೆ:** ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯ, ಮುಖ್ಯ ಸಂಪಾದಕರ ಪತ್ರ ಸಂಖ್ಯೆ:ಕಗ್ಯಾಇ. ಆರಾ.ದ.ಕ.ಜಿ.ಗ್ಯಾ ಸಭೆ 2004-05, ದಿನಾಂಕ:20/11/2004, 03/02/2005 5/4/2005.

**ಪ್ರಸ್ತಾವನೆ:**

ಮೇಲೆ ಓದಲಾದ ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯ ಮುಖ್ಯ ಸಂಪಾದಕರ ಪತ್ರದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್ ಪರಿಷ್ಕೃತ (ಉಡುಪಿ ಜಿಲ್ಲೆಯೂ ಸೇರಿದಂತೆ) ಆವೃತ್ತಿಯನ್ನು ಪ್ರಕಟಿಸುವ ಉದ್ದೇಶದಿಂದ ಸಲಹಾ ಸಮಿತಿ ಸದಸ್ಯರ ಪಟ್ಟಿಯನ್ನು ಸಲ್ಲಿಸಿರುತ್ತಾರೆ. ಆದರೆ ಉಡುಪಿ ಜಿಲ್ಲೆಯು ದಕ್ಷಿಣ ಕನ್ನಡ ಜಿಲ್ಲೆಯಿಂದ ಬೇರ್ಪಟ್ಟು ಪ್ರತ್ಯೇಕ ಜಿಲ್ಲೆಯಾಗಿ ಸುಮಾರು ಎಂಟು ವರ್ಷಗಳು ಕಳೆದಿರುವುದರಿಂದ ಇದರ ಪರಿಷ್ಕೃತ ಗ್ಯಾಸೆಟಿಯರ್‌ನ್ನು ಪ್ರತ್ಯೇಕವಾಗಿ ಪ್ರಕಟಿಸುವುದು ಸೂಕ್ತವೆಂದು ಅಭಿಪ್ರಾಯ ಪಡಲಾಗಿತ್ತು. ಉಡುಪಿ ಜಿಲ್ಲೆಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಪರಿಷ್ಕೃತ ಗ್ಯಾಸೆಟಿಯರ್‌ನ್ನು ಪ್ರಕಟಿಸಲು ಉದ್ದೇಶಿಸಿರುವುದರಿಂದ ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್ ಸಲಹಾ ಸಮಿತಿಯಲ್ಲಿ ಉಡುಪಿ ಜಿಲ್ಲೆಯ ಇಬ್ಬರು ಪರಿಣತರನ್ನು ಸದಸ್ಯರನ್ನಾಗಿ ಮಾಡಬೇಕೆಂಬುದು ಸೂಚನೆಯಾಗಿತ್ತು. ಈಗಾಗಲೇ ನಿರ್ಧರಿಸಿದಂತೆ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ಪರಿಷ್ಕೃತ ಗ್ಯಾಸೆಟಿಯರ್‌ಗಳ ಪ್ರತ್ಯೇಕವಾಗಿ ಹೊರತರಲು ಸಲಹಾ ಸಮಿತಿಯನ್ನು ರಚಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯ ಮುಖ್ಯ ಸಂಪಾದಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಂಕಇ 36 ಕರಾಗೆ 2004, ಬೆಂಗಳೂರು, ದಿನಾಂಕ: 25ನೇ ಮೇ 2005**

ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್ ಸಲಹಾ ಸಮಿತಿಯನ್ನು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಮಾನ್ಯ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಕೂಡಲೇ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ರಚಿಸಲಾಗಿದೆ.

| | | | |
|---|---|---|---|
| 1. | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು,<br>3ನೇ ಮಹಡಿ, ವಿಧಾನಸೌಧ, ಬೆಂಗಳೂರು. | - | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಕನ್ನಡ ಮತ್ತು ಸಂಸ್ಕೃತಿ ಇಲಾಖೆ | - | ಸದಸ್ಯರು |
| 3. | ಡಾ।। ಕೆ.ವಿ. ರಮೇಶ್,<br>ನಿರ್ದೇಶಕರು, ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್, ಮೈಸೂರು-570 005. | - | ಸದಸ್ಯರು |
| 4. | ಶ್ರೀ ಏರ್ಯ ಲಕ್ಷ್ಮೀನಾರಾಯಣ ಆಳ್ವ<br>'ಸಾಕೇತ', ಮೊಡಂ ಕಾಪು - 574 219 | - | ಸದಸ್ಯರು |
| 5. | ಡಾ।। ಮುರಳೀಧರ ಉಪಾಧ್ಯಾಯ ಹಿಡಿಯಡ್ಕ,<br>ಕನ್ನಡ ಇಲಾಖಾ ಮುಖ್ಯಸ್ಥರು, ಪೂರ್ಣಪ್ರಜ್ಞ ಸಂಜೆ ಕಾಲೇಜು, ಉಡುಪಿ. | - | ಸದಸ್ಯರು |
| 6. | ಡಾ।। ಶಂಕರ ಖಂಡೇರಿ,<br>ನಿವೃತ್ತ ನ್ಯಾಯಾಧೀಶರು, ದರ್ಬೆ, ಪುತ್ತೂರು-574 202 | - | ಸದಸ್ಯರು |
| 7. | ಡಾ।। ನಾ.ಮೊಗಸಾಲೆ, ನಿವೃತ್ತ ವೈದ್ಯಾಧಿಕಾರಿ,<br>ಕವಿತಾ, ಕಾಂತಾವರ - 574 129 | - | ಸದಸ್ಯರು |
| 8. | ಡಾ।। ಚಂದ್ರಶೇಖರ ದಾಮ್ಲೆ, ಮುಖ್ಯಸ್ಥರು,<br>ಸಮಾಜಶಾಸ್ತ್ರ ವಿಭಾಗ, ನೆಹರು ಮೆಮೋರಿಯಲ್ ಕಾಲೇಜು, ಸುಳ್ಯ - 574 327 | - | ಸದಸ್ಯರು |
| 9. | ಡಾ।। ದಾಮೋದರ ಶೆಟ್ಟಿ, ಪ್ರಸಾಧನ,<br>ಭಾರತೀನಗರ ಬಿಜೈ, ಮಂಗಳೂರು-574 005 | - | ಸದಸ್ಯರು |
| 10. | ಡಾ।। ಎನ್.ಕೆ. ತಿಂಗಳಾಯ, 53, ಗಾರ್ಡನ್ ಮ್ಯಾನರ್,<br>ಎಸ್.ಬಿ. ರಸ್ತೆ, ಲೇಡಿ ಹಿಲ್, ಮಂಗಳೂರು-574 006 | - | ಸದಸ್ಯರು |
| 11. | ಬೋಳುವಾರು ಮಹಮದ್ ಕುಂಞ್ಞಿ ಸೀನಿಯರ್ ಬ್ಯಾಂಕ್ ಮ್ಯಾನೇಜರ್,<br>ಸಿಂಡಿಕೇಟ್ ಬ್ಯಾಂಕ್, ಗಾಂಧೀನಗರ, ಬೆಂಗಳೂರು-560 009 | - | ಸದಸ್ಯರು |
| 12. | ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು. | - | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 819

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಸಾರಿಗೆ ಸಚಿವಾಲಯ

**ವಿಷಯ:** ಸಾರಿಗೆ ಇಲಾಖೆಯ 26 ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳನ್ನು ಹಿರಿಯ ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳನ್ನಾಗಿ ಉನ್ನತೀಕರಿಸಿ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಾರಿಇ 6 ಸಾಇಸೆ 2005, ದಿನಾಂಕ: 26.4.2005.

2. ಸಾರಿಗೆ ಆಯುಕ್ತರ ಪ್ರಸ್ತಾವನೆ ಸಂಖ್ಯೆ: ಸಾಆ:ಸಿಬ್ಬಂದಿ-1:ಪಿಆರ್-153:2002-03 ದಿನಾಂಕ: 26.4.2005.

**ಪ್ರಸ್ತಾವನೆ:**

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ಮೇಲೆ ಓದಲಾದ (1)ರ ಆದೇಶದಲ್ಲಿ ಸಾರಿಗೆ ಇಲಾಖೆಯಲ್ಲಿ ಹಾಲಿ ಇರುವ ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳಲ್ಲಿ 26 ಹುದ್ದೆಗಳನ್ನು ವೃಂದ ಮತ್ತು ನೇಮಕಾತಿ ನಿಯಮಾನುಸಾರ ಹಿರಿಯ ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳಾಗಿ ಉನ್ನತೀಕರಿಸಲಾಗಿದೆ.

ಉಲ್ಲೇಖ (2)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಸಾರಿಗೆ ಆಯುಕ್ತರು ಇಲಾಖೆಯ ಆಡಳಿತ ದೃಷ್ಟಿಯಿಂದ 26 ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳನ್ನು ಕಡಿತಗೊಳಿಸಿ, ಹೊಸದಾಗಿ ಉನ್ನತೀಕರಿಸಲಾದ 26 ಹಿರಿಯ ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳನ್ನು ವಿವಿಧ ಕಛೇರಿಗಳಿಗೆ ಹಂಚಿಕೆ ಮಾಡಲು ಇಲಾಖೆಯು ಪ್ರಸ್ತಾಪಿಸಿದ್ದು 26 ಮೋಟಾರು ವಾಹನ ನಿರೀಕ್ಷಕರುಗಳ ಹುದ್ದೆಗಳನ್ನು ಈ ಕೆಳಕಂಡ ಕಛೇರಿಗಳಿಂದ ಕಡಿತಗೊಳಿಸಿ ಉನ್ನತೀಕರಿಸಲಾದ ಹಿರಿಯ ಮೋಟಾರು ವಾಹನ ನಿರೀಕ್ಷಕರುಗಳು ಹುದ್ದೆಗಳನ್ನು ವಿವಿಧ ಕಛೇರಿಗಳಿಗೆ ಮರುಹಂಚಿಕೆ ಮಾಡಿ ಆದೇಶ ಹೊರಡಿಸಬೇಕಾಗಿರುತ್ತದೆ.

| ಕ್ರ. ಸಂ. | ಕಛೇರಿಯ ಹೆಸರು | ಕಡಿತಗೊಂಡ ಮೋ.ವಾ.ನಿ.ರ ಹುದ್ದೆಗಳು | ಹಂಚಿಕೆಯಾದ ಹಿ.ಮೋ.ವಾ.ನಿ.ರ ಹುದ್ದೆಗಳು |
|---|---|---|---|
| 1. | ಬೆಂಗಳೂರು (ಕೇಂದ್ರ) | 03 | 05 |
| 2. | ಬೆಂಗಳೂರು (ಪಶ್ಚಿಮ) | 03 | 02 |
| 3. | ಬೆಂಗಳೂರು (ಪೂರ್ವ) | 03 | 05 |
| 4. | ಬೆಂಗಳೂರು (ಉತ್ತರ) | 05 | 03 |
| 5. | ಬೆಂಗಳೂರು (ದಕ್ಷಿಣ) | 05 | - |
| 6. | ಮೈಸೂರು | 02 | 02 |
| 7. | ಚಾಮರಾಜನಗರ | 01 | 01 |
| 8. | ಶಿವಮೊಗ್ಗ | 01 | - |
| 9. | ಮಂಗಳೂರು | 03 | 01 |
| 10. | ತುಮಕೂರು | - | 01 |
| 11. | ಹಾಸನ | - | 01 |
| 12. | ಚಿಕ್ಕಮಗಳೂರು | - | 01 |
| 13. | ಧಾರವಾಡ | - | 01 |
| 14. | ಕಾರವಾರ | - | 01 |
| 15. | ಬಳ್ಳಾರಿ | - | 01 |
| 16. | ಹೊಸಪೇಟೆ | - | 01 |
| | **ಒಟ್ಟು** | **26** | **26** |

ಮೇಲ್ಕಂಡ ಎಲ್ಲಾ ಅಂಶಗಳನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ ಇಲಾಖಾ ಹಾಗೂ ರಾಜಸ್ವದ ಹಿತದೃಷ್ಟಿಯಿಂದ ಮೇಲ್ಕಂಡ ಆದೇಶವನ್ನು ಹೊರಡಿಸಲು ಸೂಕ್ತವೆಂದು ಪರಿಗಣಿಸಿ ಅದರಂತೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಾರಿಇ 6 ಸಾಇಸೆ 2005, ಬೆಂಗಳೂರು, ದಿನಾಂಕ: 6ನೇ ಜೂನ್ 2005**

**(ಯುನಿಕ್ ಕ್ರ.ಸಂ.ಸಾರಿಇ.115/2005, ದಿನಾಂಕ:12ನೇ ಮೇ 2005)**

ಸಾರಿಗೆ ಆಯುಕ್ತರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಸಾರ್ವಜನಿಕರ ಮತ್ತು ಇಲಾಖಾ ಹಿತದೃಷ್ಟಿಯಿಂದ ಈ ಕೆಳಕಂಡ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಿ ಸ್ಥಳಾಂತರಿಸಲಾಗಿದೆ.

| ಕ್ರ. ಸಂ. | ಕಛೇರಿಯ ಹೆಸರು | ಕಡಿತಗೊಂಡ ಮೋ.ವಾ.ನಿ.ರ ಹುದ್ದೆಗಳು | ಹಂಚಿಕೆಯಾದ ಹಿ.ಮೋ.ವಾ.ನಿ.ರ ಹುದ್ದೆಗಳು |
|---|---|---|---|
| 1. | ಬೆಂಗಳೂರು (ಕೇಂದ್ರ) | 03 | 05 |
| 2. | ಬೆಂಗಳೂರು (ಪಶ್ಚಿಮ) | 03 | 02 |
| 3. | ಬೆಂಗಳೂರು (ಪೂರ್ವ) | 03 | 05 |
| 4. | ಬೆಂಗಳೂರು (ಉತ್ತರ) | 05 | 03 |
| 5. | ಬೆಂಗಳೂರು (ದಕ್ಷಿಣ) | 05 | - |
| 6. | ಮೈಸೂರು | 02 | 02 |
| 7. | ಚಾಮರಾಜನಗರ | 01 | 01 |
| 8. | ಶಿವಮೊಗ್ಗ | 01 | - |
| 9. | ಮಂಗಳೂರು | 03 | 01 |
| 10. | ತುಮಕೂರು | - | 01 |
| 11. | ಹಾಸನ | - | 01 |
| 12. | ಚಿಕ್ಕಮಗಳೂರು | - | 01 |

| ಕ್ರ. ಸಂ. | ಕಛೇರಿಯ ಹೆಸರು | ಕಡಿತಗೊಂಡ ಮೋ.ವಾ.ನಿ.ರ ಹುದ್ದೆಗಳು | ಹಂಚಿಕೆಯಾದ ಹಿ.ಮೋ.ವಾ.ನಿ.ರ ಹುದ್ದೆಗಳು |
|---|---|---|---|
| 13. | ಧಾರವಾಡ | - | 01 |
| 14. | ಕಾರವಾರ | - | 01 |
| 15. | ಬಳ್ಳಾರಿ | - | 01 |
| 16. | ಹೊಸಪೇಟೆ | - | 01 |
| | **ಒಟ್ಟು** | **26** | **26** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 820

**ಬಿ. ವಾಸುದೇವ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

**ವಿಷಯ:** ಬೆಂಗಳೂರು ನಗರದಲ್ಲಿ ಐದು ಹೆಚ್ಚುವರಿ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಚೇರಿಗಳನ್ನು ತೆರೆಯುವ ಬಗ್ಗೆ.

**ಓದಲಾಗಿದೆ:** 1. ಸಾರಿಗೆ ಆಯುಕ್ತರ ಪತ್ರ ಸಂ:ಸಾಆ/ಸಿಬ್ಬಂದಿ-1/ಪಿಆರ್ 163/04-05, ದಿ: 18.12.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಸಾರಿಗೆ ಆಯುಕ್ತರು ಈಗ ಹಾಲಿ ಇರುವ ಐದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಚೇರಿಗಳನ್ನು 1984ನೇ ಸಾಲಿನಲ್ಲಿ ತೆರೆಯಲಾಗಿದ್ದು 20 ವರ್ಷಗಳ ಅವಧಿಯಲ್ಲಿ ಜನಸಂಖ್ಯೆ ಹಾಗೂ ವಾಹನಗಳ ನೋಂದಣಿ ಶೇಕಡ.87 ರಷ್ಟು ಹೆಚ್ಚಿದ್ದು ಅದಕ್ಕೆ ಅನುಗುಣವಾಗಿ ಹೊಸದಾಗಿ ಕಛೇರಿಗಳು ತೆರೆಯದೇ ಇದ್ದುದ್ದರಿಂದ ಸಾರ್ವಜನಿಕರಿಗೆ ವಾಹನಗಳ ನೊಂದಣಿ, ಚಾಲನಾ ಅನುಜ್ಞಾ ಪತ್ರ, ರಹದಾರಿ ಇತ್ಯಾದಿಗಳನ್ನು ನೀಡಲು ತೊಂದರೆಯಾಗುತ್ತಿರುವುದರಿಂದ, ಸಾರ್ವಜನಿಕರ ಕಾರ್ಯನಿರ್ವಹಣೆಯಲ್ಲಿ ಅಡಚಣೆ ಉಂಟಾಗುತ್ತಿದ್ದು ಇದನ್ನು ಜವಾಬ್ದಾರಿಯಿಂದ ನಿರ್ವಹಿಸಲು ಅಧಿಕಾರ ವಿಕೇಂದ್ರಿಕರಣದ ಹಿನ್ನೆಲೆಯಲ್ಲಿ ಹೊಸದಾಗಿ ಐದು ಪ್ರಾದೇಶಿಕ ಸಾರಿಗೆ ಕಚೇರಿಗಳನ್ನು ತೆರೆಯಬೇಕೆಂದು ಅದರಲ್ಲಿ ಈಗಾಗಲೇ ಅಸ್ತಿತ್ವದಲ್ಲಿರುವ ರಾಜರಾಜೇಶ್ವರಿ ನಗರದ ಸಹಾಯಕ ಪ್ರಾದೇಶಿಕ ಸಾರಿಗೆ ಕಚೇರಿಯನ್ನು ಪ್ರಾದೇಶಿಕ ಸಾರಿಗೆ ಕಛೇರಿಯನ್ನಾಗಿ ಮೇಲ್ದರ್ಜೆಗೇರಿಸುವಂತಹ ಹಾಗೂ ಯಲಹಂಕ, ಕೃಷ್ಣರಾಜಪುರಂ, ಬನ್ನೇರುಘಟ್ಟ, ಮತ್ತು ನೆಲಮಂಗಲದಲ್ಲಿ ನಾಲ್ಕು ಹೊಸ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಚೇರಿಗಳನ್ನು ತೆರೆಯುವಂತೆ ಕೋರಿರುತ್ತಾರೆ. ಅಲ್ಲದೇ, ಉನ್ನತೀಕರಣ ಹೊಂದಲಿರುವ ಸಹಾಯಕ ಪ್ರಾದೇಶಿಕ ಸಾರಿಗೆ ಕಚೇರಿ ಮತ್ತು ಪ್ರಸ್ತಾಪಿತ ಹೆಚ್ಚುವರಿ ನಾಲ್ಕು ಪ್ರಾದೇಶಿಕ ಸಾರಿಗೆ ಕಚೇರಿಗಳಿಗೆ ಸಿಬ್ಬಂದಿ, ಪೀಠೋಪಕರಣ ಮತ್ತು ವಾಹನಗಳನ್ನು ಹಾಲಿ ಇರುವ ಕಛೇರಿಯಿಂದಲೇ ಸರಿದೂಗಿಸಿಕೊಳ್ಳುವಂತೆಯೂ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳನ್ನು ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ವೃಂದದಿಂದ ಬಡ್ತಿ ನೀಡಿ ಭರ್ತಿ ಮಾಡಿಕೊಳ್ಳುವಂತೆ ಸೂಚಿಸಿರುತ್ತಾರೆ. ಸದರಿ ಕಛೇರಿ ವ್ಯಾಪ್ತಿಗೆ ಬರುವ ಸ್ಥಳಗಳನ್ನು ಅನುಬಂಧದಲ್ಲಿ ನೀಡಿರುತ್ತಾರೆ.

ಸಾರಿಗೆ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಸಾರಿಇ 39 ಸಾಇಪ 2005, ಬೆಂಗಳೂರು, ದಿನಾಂಕ: 6ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನೊಳಗೊಂಡಂತೆ ರಾಜರಾಜೇಶ್ವರಿ ನಗರದಲ್ಲಿ ಈಗಾಗಲೇ ಅಸ್ತಿತ್ವದಲ್ಲಿರುವ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಯನ್ನು ಪ್ರಾದೇಶಿಕ ಸಾರಿಗೆ ಕಚೇರಿಯನ್ನಾಗಿ ಉನ್ನತೀಕರಿಸಲಾಗಿದೆ ಹಾಗೂ ಯಲಹಂಕ, ಕೃಷ್ಣರಾಜಪುರಂ, ಬನ್ನೇರುಘಟ್ಟ, ಮತ್ತು ನೆಲಮಂಗಲದಲ್ಲಿ (ಅನುಬಂಧದಲ್ಲಿ ಸೂಚಿಸಿರುವ ಸ್ಥಳಗಳನ್ನೊಳಗೊಂಡಂತೆ) ಹೊಸದಾಗಿ ಪ್ರಾದೇಶಿಕ ಸಾರಿಗೆ ಕಚೇರಿಗಳನ್ನು ತೆರೆಯಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮತಿ ನೀಡಿದೆ.

1. ರಾಜರಾಜೇಶ್ವರಿನಗರ, ರಾಯಚೂರು, ಚಿಕ್ಕಮಗಳೂರು, ಹಾವೇರಿ ಮತ್ತು ಕಾರವಾರ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಚೇರಿಯಲ್ಲಿ ಅಸ್ತಿತ್ವದಲ್ಲಿರುವ ಒಂದೊಂದು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಹುದ್ದೆಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಹುದ್ದೆಗಳನ್ನಾಗಿ ಉನ್ನತೀಕರಿಸಿ ರಾಜರಾಜೇಶ್ವರಿ ನಗರ, ಯಲಹಂಕ, ಕೃಷ್ಣರಾಜಪುರಂ, ಬನ್ನೇರುಘಟ್ಟ, ಮತ್ತು ನೆಲಮಂಗಲದಲ್ಲಿ ಹೊಸದಾಗಿ ಸೃಜಿಸಿರುವ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಚೇರಿಗಳಿಗೆ ಸ್ಥಳಾಂತರಿಸಲಾಗಿದೆ. ಸದರಿ ಉನ್ನತೀಕರಣದಿಂದ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ವೃಂದದಲ್ಲಿನ ಐದು ಹುದ್ದೆಗಳನ್ನು ಕಡಿತಗೊಳಿಸಲಾಗಿದ್ದು ಹೊಸ ಹುದ್ದೆಗಳನ್ನು ಸೃಜಿಸಲಾಗುವುದಿಲ್ಲ.

2. ಸದರಿ ಪ್ರಾದೇಶಿಕ ಸಾರಿಗೆ ಕಛೇರಿಗಳಿಗೆ ಸಿಬ್ಬಂದಿ ಮತ್ತು ವಾಹನಗಳನ್ನು ಈಗಾಗಲೇ ಅಸ್ತಿತ್ವದಲ್ಲಿರುವ ಕಛೇರಿಗಳಿಂದ ಪಡೆಯತಕ್ಕದ್ದು.

3. ಪಿಠೋಪಕರಣಗಳನ್ನು ಸಹ ಹಾಲಿ ಅಸ್ತಿತ್ವದಲ್ಲಿರುವ ಪ್ರಾದೇಶಿಕ ಸಾರಿಗೆ ಕಛೇರಿ/ಸಹಾಯಕ ಪ್ರಾದೇಶಿಕ ಸಾರಿಗೆ ಕಚೇರಿಗಳಿಂದಲೇ ಸರಿದೂಗಿಸಿಕೊಳ್ಳತಕ್ಕದ್ದು.

4. ಸದರಿ ಉನ್ನತೀಕರಣ ಮೊದಲ ಹೊಸ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಾರ್ಯಭಾರ ವಹಿಸಿಕೊಂಡ ತಕ್ಷಣದಿಂದ ಕಾರ್ಯರೂಪಕ್ಕೆ ಬರುತ್ತದೆ,

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ 496 ವೆಚ್ಚ 6/2005, ದಿ:4.5.2005ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವಾಸುದೇವ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

**ಸರ್ಕಾರದ ಆದೇಶ ಸಂ:ಸಾರಿಇ 39 ಸಾಇಪ 2005, ದಿನಾಂಕ: 6ನೇ ಜೂನ್ 2005ಕ್ಕೆ ಅನುಬಂಧ**

| ಕ್ರ. ಸಂ. | ಪ್ರಾದೇಶಿಕ ಸಾರಿಗೆ ಕಚೇರಿ, ಹೊಸದಾಗಿ ತೆರೆಯಲು ಪ್ರಸ್ತಾಪಿಸಿರುವ ಸ್ಥಳ | ಪ್ರಾದೇಶಿಕ ಸಾರಿಗೆ ಕಛೇರಿ ವ್ಯಾಪ್ತಿಯಲ್ಲಿ ಬರುವ ಸ್ಥಳಗಳು |
|---|---|---|
| 1. | ಯಲಹಂಕ | ಯಲಹಂಕ, ಯಲಹಂಕ ಸೆಟಲೈಟ್ ಟೌನ್, ಯಲಹಂಕ ನ್ಯೂ ಟೌನ್, ಕೆ.ಹೆಚ್.ಬಿ. ಕಾಲೋನಿ, ಕಾಟೇಗೆನಹಳ್ಳಿ, ಶ್ರೀನಿವಾಸಪುರ, ಕೋಗ್ನಿ, ಅಗ್ರಹಾರ, ಸಿಆರ್‌ಪಿ ಎಫ್,ಅನಂತಪುರ, ಅಟ್ಟೂರು, ನೆಹರೂ ನಗರ, ಪುಟ್ಟೇನಹಳ್ಳಿ, ಅಳ್ಳಾಳಸಂದ್ರ, ಚಿಕ್ಕಬೊಮ್ಮಸಂದ್ರ, ಜುಡಿಷಿಯಲ್ ಲೇಔಟ್, ಜಿ.ಕೆ.ವಿ.ಕೆ. ರಾಜೀವ ಗಾಂಧೀನಗರ, ಜಕ್ಕೂರು, ಬ್ಯಾಟರಾಯನಪುರ, ಕಾಫೀ ಬೋರ್ಡ್ ಲೇಔಟ್, ಹೆಬ್ಬಾಳ, ಕೆಂಪಾಪುರ, ಸಹಕಾರನಗರ, ಕೋಡಿಗೇನಹಳ್ಳಿ, ಕೋಡಿಹೊಸಹಳ್ಳಿ, ಟಾಟಾನಗರ, ತಿಂಡ್ಲು, ವಿದ್ಯಾರಣ್ಯಪುರ, ದೊಡ್ಡಬೊಮ್ಮಸಂದ್ರ, ಸಿಂಗಾಪೂರ್, ರಾಮಚಂದ್ರಪುರ, ಗಂಗಮ್ಮ ಸರ್ಕಲ್, ಎಂ.ಎಸ್. ಪಾಳ್ಯ, ಮದರ್ ಡೈರಿ, ಉಳಾಹಳ್ಳಿ ಪೂರ್ವ, ಚಿಕ್ಕಸಂದ್ರ, ಗುಡ್ಡಹಳ್ಳಿ, ಅಬ್ಬಿಗೆರೆ, ಚಿಕ್ಕಬಾಣಾವರ, ಅರ್ಕಾವತಿ ಲೇಔಟ್, ಹೊರವರ್ತುಲ ರಸ್ತೆಯ ನಂತರದ ಕಾಲೋನಿಗಳು. |

| ಕ್ರ. ಸಂ. | ಪ್ರಾದೇಶಿಕ ಸಾರಿಗೆ ಕಚೇರಿ, ಹೊಸದಾಗಿ ತೆರೆಯಲು ಪ್ರಸ್ತಾಪಿಸಿರುವ ಸ್ಥಳ | ಪ್ರಾದೇಶಿಕ ಸಾರಿಗೆ ಕಛೇರಿ ವ್ಯಾಪ್ತಿಯಲ್ಲಿ ಬರುವ ಸ್ಥಳಗಳು |
|---|---|---|
| 2. | ಕೃಷ್ಣರಾಜಪುರಂ | ಕೆ.ಆರ್.ಪುರಂ, ಹೊಸಕೋಟೆ ತಾಲ್ಲೂಕು, ವಿರ್ಗೋನಗರ, ಅವಲಹಳ್ಳಿ ಹೇರಂಡಹಳ್ಳಿ, ಬಿದರ ಹಳ್ಳಿ ಕಟ್ಟಿಗೆ ಹಳ್ಳಿ, ದೇವಸಂದ್ರ, ಜಂಬೂಜೆಟ್ಟಿ ಪಾಳ್ಯ, ರಾಮಮೂರ್ತಿನಗರ, ಕಲ್ಕೆರೆ, ಚನ್ನಸಂದ್ರ, ಕಸ್ತೂರಿನಗರ, ಬಾಣಸವಾಡಿ, ಮಾರುತಿ ಸೇವಾನಗರ, ಡಿಫೆನ್ಸ್ ಕಾಲೋನಿ ಲೇ ಔಟ್, ಹೆಚ್.ಬಿ.ಆರ್. ಲೇಔಟ್, ಹೆಣ್ಣೂರು, ಕಲ್ಯಾಣನಗರ, ಜೀವನಹಳ್ಳಿ, ಕಮ್ಮನಹಳ್ಳಿ, ಎ ನಾರಾಯಣಪುರ, ಬಿ ನಾರಾಯಣಪುರ, ಐ.ಟಿ.ಐ.ಲೇಔಟ್, ಮಹದೇವಪುರ, ಗರುಡಾಚಾರ ಪಾಳ್ಯ, ಹುಡಿ ಮತ್ತು ಹುಡಿ ಕೈಗಾರಿಕಾ ಪ್ರದೇಶ, ಐ.ಟಿ.ಪಿ.ಎಲ್. ಕಗ್ಗದಾಸಪುರ, ವರ್ತೂರು, ವೈಟ್ ಫೀಲ್ಡ್, ವಗತ, ದೇವನಗುಡಿ, ಸೊರಹುಣಸೆ, ಕೊಡಿ. |
| 3. | ರಾಜರಾಜೇಶ್ವರಿ ನಗರ | ರಾಜ ರಾಜೇಶ್ವರಿನಗರ, ಪಟ್ಟಣಗೆರೆ, ಮೈಲಸಂದ್ರ, ಆರ್.ವಿ. ಕಾಲೇಜ್, ರೆಮ್ಕೊ ಲೇಔಟ್, ಬೆಮೆಲ್ ಲೇಔಟ್, ಸ್ಟೇಜ್ I ರಿಂದ IV, ಶ್ರೀನಿವಾಸಪುರ, ಚನ್ನಾಸಂದ್ರ ಲೇಔಟ್, ಪೂರ್ಣಪ್ರಜ್ಞಾ ಹೌಸಿಂಗ್ ಸೊಸೈಟಿ ಲೇಔಟ್, ಕೊಡಿಪುರ, ಅರೇಹಳ್ಳಿ, ಆಂಜನೇಯ ಸ್ವಾಮಿ ಲೇಔಟ್, ಹೊಸಕೆರೆ ಹಳ್ಳಿ, ಪಿ.ಇ.ಎಸ್. ಕಾಲೇಜ್, ನಾಗರಭಾವಿ I to IV ಸ್ಟೇಜ್, ಬಿ.ಡಿ.ಎ. ಕಾಂಪ್ಲೆಕ್ಸ್, ಎನ್.ಜಿ.ಇ.ಎಫ್. ಲೇಔಟ್, ಮೂಡಲ ಪಾಳ್ಯ, ಚಂದ್ರಾಲೇಔಟ್, Income tax layout ಜ್ಞಾನಭಾರತಿ, ಉಲ್ಲಾಳ, ಮಲ್ಲತಹಳ್ಳಿ, ಪಾಪರೆಡ್ಡಿ ಪಾಳ್ಯ, ಅನ್ನಪೂರ್ಣೇಶ್ವರಿ ನಗರ, ಶ್ರೀಗಂಧಕಾವಲ್, ಸುಂಕದಕಟ್ಟೆ, ಕಾಮಾಕ್ಷಿಪಾಳ್ಯ, ವಿಶ್ವನೀದಮ್, ಮಾಜೋ ಹಳ್ಳಿ, ಆಂಧ್ರಹಳ್ಳಿ, ಪೂರ್ಣಪ್ರಜ್ಞನಗರ, ಎನ್.ಜಿ.ಓ. ಲೇಔಟ್, ಸಿಂಡಿಕೇಟ್ ಬ್ಯಾಂಕ್ ಲೇಔಟ್, ಬಿ.ಇ.ಎಲ್. ಲೇಔಟ್, ಮಾಗಡಿ, ಮಾಗಡಿ ತಾಲ್ಲೂಕು, ತಾವರೆಕೆರೆ, ತಿಪ್ಪಗೊಂಡನಹಳ್ಳಿ, ಜ್ಞಾನಪ್ರಿಯನಗರ, ಕೆಂಗೇರಿ, ಕೆಂಗೇರಿ ಉಪನಗರ, ನಾಯಂಡನಹಳ್ಳಿ, ಬಿದರಿ, ದೊಡ್ಡ ಆಲದಮರ, ರೋಮೋಹಳ್ಳಿ, ಕುಂಬಳಗೋಡು, ಟಿಂಬರ್ ಯಾರ್ಡ್ ಲೇಔಟ್, ಬ್ಯಾಟರಾಯನಪುರ, ಗಿರಿನಗರ, ಶ್ರೀನಗರ, ಆವಲಹಳ್ಳಿ, ನಾಗೇಂದ್ರಬ್ಲಾಕ್, ಹಳೇ ಗುಡ್ಡದಹಳ್ಳಿ |
| 4. | ಬನ್ನೇರುಘಟ್ಟ | ಕನಕಪುರ ರಸ್ತೆ, ಯಲೇಚನಹಳ್ಳಿ, ಕುಮಾರ್ ಸ್ವಾಮಿ ಲೇಔಟ್, ಪದ್ಮನಾಭನಗರ, ಚಿಕ್ಕಲ್ಲಸಂದ್ರ, ಕೋಣನಕುಂಟೆ, ಹಾರೋಹಳ್ಳಿ, ಸೋಮನಹಳ್ಳಿ, ಬನ್ನೇರುಘಟ್ಟ ರಸ್ತೆ, ಹೊಸೂರು ಸರ್ಜಾಪುರ ರಸ್ತೆ, ಬಿ.ಟಿ.ಎಮ್. ಲೇಔಟ್, ಜೆ.ಪಿ. ನಗರ 6ನೇ ಹಂತ, 7ನೇ ಹಂತ, ಅಂಜನಾಪೂರ ಲೇಔಟ್, ತಳಘಟ್ಟಪುರ, ಪುಟ್ಟೇನಹಳ್ಳಿ, ಆರ್.ಬಿ.ಐ.ಕಾಲೋನಿ, ಕೊಟ್ಟಮ ದಿನ್ನೆ, ಮೈಕೋ ಲೇಔಟ್, ಅರಕೆರೆ, ಮೀನಾಕ್ಷಿ ದೇವಸ್ಥಾನ ರಸ್ತೆ ಲೇಔಟ್, ಹೊರ ವರ್ತುಲ ರಸ್ತೆ, ಅಗರ, ಸರ್ಜಾಪುರ, ಹೆಚ್.ಎಸ್.ಆರ್. ಲೇಔಟ್, ಬೆಳಂದೂರು, ಬೊಮ್ಮನಹಳ್ಳಿ, ಮಂಗಮ್ಮನಪಾಳ್ಯ, ಬೇಗೂರು ರೂಪೇನ ಅಗ್ರಹಾರ, ಎಲೆಕ್ಟ್ರಾನಿಕ್ ಸಿಟಿ, ಹುಸ್ಕೂರು, ಚಂದಾಪೂರ್, ಅತ್ತಿಬೆಲೆ, ಜಿಗಣಿ, ಆನೇಕಲ್ ತಾಲ್ಲೂಕು. |
| 5. | ನೆಲಮಂಗಲ | ನೆಲಮಂಗಲ ತಾಲ್ಲೂಕು, ದಾಸನಪುರ ನಗರ ಸಭೆ ಪ್ರದೇಶ, ಅರಶಿನಕುಂಟೆ, 12ನೇ ಮೈಲಿಯಿಂದ ಅಂದರೆ ಹಿಮಾಲಯ ಡ್ರಗ್ ಕಂಪೆನಿ, ಡಾಬಸ್ ಪೇಟೆ, ತ್ಯಾಮಗೊಂಡ್ಲು. |

**ಬಿ. ವಾಸುದೇವ**

ಪಿ.ಆರ್. 821 ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಕಾರ್ಯದರ್ಶಿಗಳು, ಬಾಲಭವನ ಸೊಸೈಟಿ, ಬೆಂಗಳೂರು ರವರು ಆಡಳಿತಾತ್ಮಕ ಹಾಗೂ ಆರ್ಥಿಕ ಅಧಿಕಾರವನ್ನು ನಿರ್ವಹಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ/ಮಮಇ/24/ರಾಮಅ/2002, ಬೆಂಗಳೂರು, ದಿನಾಂಕ/03-06-2002.

2. ಪತ್ರಸಂಖ್ಯೆ/ಬಾಭಬೆಂ/ಸಿಬ್ಬಂದಿ/2004-05/1241, ದಿನಾಂಕ: 30.1.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಆಡಳಿತ ನಿಯಂತ್ರಣಕ್ಕೊಳಪಡುವ ಬಾಲಭವನ ಸೊಸೈಟಿ, ಬೆಂಗಳೂರು, ಇಲ್ಲಿಗೆ ಬಾಲಭವನದ ಕಾರ್ಯದರ್ಶಿ ಹುದ್ದೆಯನ್ನು ರೂ.10,620-14,960ರ ವೇತನ ಶ್ರೇಣಿಯ ಕರ್ನಾಟಕ ಆಡಳಿತಾ ಸೇವಾ (ಹಿರಿಯ ಶ್ರೇಣಿ)ಯ ಹುದ್ದೆಯನ್ನು ಸೃಜಿಸಲಾಗಿದೆ.

ಕಾರ್ಯದರ್ಶಿಗಳು, ಬಾಲಭವನ ಸೊಸೈಟಿ ಇವರು ಸರ್ಕಾರಕ್ಕೆ ಬರೆದಿರುವ ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಈ ಹಿಂದೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು, ಬಾಲಭವನದ ಪದನಿಮಿತ್ತ ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸುತ್ತಿದ್ದು, ಸದರಿ ಅಧಿಕಾರಿಗಳ ರಾಜ್ಯ ಮಟ್ಟದ ಅಧಿಕಾರಿಯಾಗಿದ್ದು, ಸಮಯದ ಅಭಾವದಿಂದ ಪೂರ್ಣ ಪ್ರಮಾಣದಲ್ಲಿ ಬಾಲಭವನದ ಕಛೇರಿಯಲ್ಲಿ ಕಾರ್ಯನಿರ್ವಹಿಸುವುದು ಸಾಧ್ಯವಾಗುತ್ತಿರಲಿಲ್ಲವಾದುದರಿಂದ ಬಾಲಭವನದಲ್ಲಿನ ಆಡಳಿತಾಧಿಕಾರಿಗಳಿಗೆ ಹಣ ಸೆಳೆಯುವ ಹಾಗೂ ಬಟವಾಡೆ ಮಾಡುವ ಅಧಿಕಾರವನ್ನು ಹಸ್ತಾಂತರಿಸಿದ್ದು, ಬಾಲಭವನ ಸೊಸೈಟಿಗೆ ಪೂರ್ಣ ಪ್ರಮಾಣದಲ್ಲಿ ಕಾರ್ಯದರ್ಶಿಗಳನ್ನು ಸರ್ಕಾರವು ನಾಮನಿರ್ದೇಶನ ಮಾಡುತ್ತಿರುವ ಹಿನ್ನೆಲೆಯಲ್ಲಿ ಹಾಗೂ ದಿನಾಂಕ:6.10.2004ರಂದು ನಡೆದ ಬಾಲಭವನ ಆಡಳಿತ ಮಂಡಳಿ ಸಮಿತಿ ಸಭೆಯಲ್ಲಿ ಕಾರ್ಯದರ್ಶಿಗಳೇ ಸಂಪೂರ್ಣ ಆಡಳಿತಾತ್ಮಕ ಹಾಗೂ ಆರ್ಥಿಕ ನಿಯಂತ್ರಣ ನಿರ್ವಹಣೆಯ ಅಧಿಕಾರವನ್ನು ನಿರ್ವಹಿಸುವುದು ಸೂಕ್ತವೆಂದು ಎಲ್ಲಾ ಸದಸ್ಯರುಗಳು ಅಭಿಪ್ರಾಯಪಟ್ಟಿರುವ ಹಿನ್ನೆಲೆಯಲ್ಲಿ ಇನ್ನು ಮುಂದೆ ಕಾರ್ಯದರ್ಶಿಗಳು ಬಾಲಭವನ ಸೊಸೈಟಿರವರೇ ಬಾಲಭವನದಲ್ಲಿನ ಸಂಪೂರ್ಣ ಆಡಳಿತಾತ್ಮಕ ಹಾಗೂ ಆರ್ಥಿಕ ಕಾರ್ಯನಿರ್ವಹಣೆಯನ್ನು ನಿರ್ವಹಿಸಲು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ:4:ರಾಮಆ:2005, ಬೆಂಗಳೂರು, ದಿನಾಂಕ: 2ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ, ಬಾಲಭವನ ಆಡಳಿತಾಧಿಕಾರಿಗಳಿಗೆ ನೀಡಿರುವ ಆರ್ಥಿಕ ಅಧಿಕಾರವನ್ನು ರದ್ದುಪಡಿಸಿ ಈ ಕೂಡಲೇ ಜಾರಿಗೆ ಬರುವಂತೆ ಕಾರ್ಯದರ್ಶಿಗಳು ಬಾಲಭವನ ಸೊಸೈಟಿ, ಬೆಂಗಳೂರು ರವರಿಗೆ ಹಣ ಸೆಳೆಯುವ ಹಾಗೂ ಬಟವಾಡೆ ಮಾಡುವ (Drawing and Disbursing Officer) ಅಧಿಕಾರ ನೀಡಲಾಗಿದೆ ಹಾಗೂ ಇನ್ನು ಮುಂದೆ ಬಾಲಭವನದಲ್ಲಿನ ಸಂಪೂರ್ಣ ಆಡಳಿತಾತ್ಮಕ ಹಾಗೂ ಆರ್ಥಿಕ ನಿರ್ವಹಣೆಯನ್ನು ಜಾರಿಯಲ್ಲಿರುವ ನಿಯಮಾನುಸಾರ ನಿರ್ವಹಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ. ಸಿದ್ಧಾಂತಿ**

ಪಿ.ಆರ್. 822

ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ದಿನಾಂಕ:1.6.2005ರಂದು ಹೊಸದೆಹಲಿಯಲ್ಲಿ ನಡೆಯುವ ಬಾಲವೇಶ್ಯ ಪದ್ಧತಿ ನಿರ್ಮೂಲನ ಕೇಂದ್ರ ಸಲಹಾ ಸಮಿತಿ ಸಭೆಗೆ ಹಾಜರಾಗುವ ಬಗ್ಗೆ.

**ಓದಲಾಗಿದೆ:**
1. ಜಂಟಿ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ನವದೆಹಲಿ ಇವರು ಬರೆದ ದಿನಾಂಕ:17.5.2004ರ ಪತ್ರ.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಬೆಂಗಳೂರು ಇವರ ಪತ್ರ ಸಂಖ್ಯೆ.ಮಮಅಇ. ಮಕ.ಎಪಿಸಿಪಿ:14:04-05 ದಿನಾಂಕ:30.5.2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:30.5.2005ರ ಪತ್ರದಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಬೆಂಗಳೂರು. ಇವರು ದಿನಾಂಕ:1.6.2005 ರಂದು ನವದೆಹಲಿಯಲ್ಲಿ ನಡೆಯಲಿರುವ ಬಾಲವೇಶ್ಯ ಪದ್ಧತಿ ನಿರ್ಮೂಲನ ಕೇಂದ್ರ ಸಲಹಾ ಸಮಿತಿ ಸಭೆಯಲ್ಲಿ ಭಾಗವಹಿಸಲು ಅನುಮತಿ ಹಾಗೂ ಕೇಂದ್ರ ಸ್ಥಾನವನ್ನು ಬಿಡಲು ಅನುಮತಿ ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ.ಮಮಇ 249 ಎಸ್‌ಜೆಡಿ 2005, ಬೆಂಗಳೂರು, ದಿನಾಂಕ: 31ನೇ ಮೇ 2005**

ಶ್ರೀ ಗೋನಾಳ್ ಭೀಮಪ್ಪ, ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು. ಕೇಂದ್ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಬಾಲವೇಶ್ಯ ಪದ್ಧತಿ ನಿರ್ಮೂಲನ ಕುರಿತು ದಿನಾಂಕ:1.6.2005ರಂದು ನಡೆಸಲು ಉದ್ದೇಶಿಸಿರುವ ಕೇಂದ್ರ ಸಲಹಾ ಸಮಿತಿ ಸಭೆಯಲ್ಲಿ ಭಾಗವಹಿಸಲು ನವದೆಹಲಿಗೆ ಪ್ರಯಾಣ ಮಾಡಲು ಅನುಮತಿ ನೀಡಲಾಗಿದೆ.

ಇವರು ನಿಯಮಾನುಸಾರ ಪ್ರಯಾಣ ಭತ್ಯೆ ಹಾಗೂ ದಿನಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಈ ಸಭೆಗೆ ಹಾಜರಾಗಲು ಬೇಕಾಗುವ ಪ್ರಯಾಣದ ಅವಧಿ ಹಾಗೂ ಸಭೆಗೆ ಹಾಜರಾದ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಆದೇಶ ಸಂ. ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.7.1996ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ನೀಡಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ. ಸಿದ್ಧಾಂತಿ**

ಪಿ.ಆರ್. 823

ಸರ್ಕಾರದ ಅಧೀನ ಕಾರ್ಯದರ್ಶಿ-2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ತಿದ್ದುಪಡಿ ಸಂ.ಮಮಇ 97 ಎಸ್‌ಜೆಡಿ 2002, ಬೆಂಗಳೂರು, ದಿನಾಂಕ: 26ನೇ ಮೇ 2005**

ಸರ್ಕಾರಿ ಆದೇಶ ಸಂಖ್ಯೆ. ಮಮಇ 97 ಎಸ್‌ಜೆಡಿ 2002 ದಿ:12.1.2005ರ ಆದೇಶದ ಭಾಗದಲ್ಲಿ ಕ್ರ.ಸಂ.1 ಹಾಗೂ 2 ರಲ್ಲಿರುವ ಶ್ರೀಮತಿ ದುರ್ಗಾಂಬ ಶ್ರೀ ಕೆ.ಜಿ. ಶಿವಮೂರ್ತಿ ಎಂಬ ಹೆಸರುಗಳನ್ನು ಶ್ರೀಮತಿ "ಎನ್.ಜಿ. ದುರ್ಗಾಂಬ" ಮತ್ತು ಶ್ರೀ "ಕೆ. ಶಿವಮೂರ್ತಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ. ಸಿದ್ಧಾಂತಿ**

ಪಿ.ಆರ್. 824

ಸರ್ಕಾರದ ಅಧೀನ ಕಾರ್ಯದರ್ಶಿ-2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ನ್ಯಾಯಮಂಡಳಿಯ ಅರ್ಜಿ ಸಂ.1844–55: 98 ರ ಶ್ರೀ ಸಿ.ಜಿ. ವಿಶ್ವನಾಥ್ ಮತ್ತು ಇತರರು –ರಾಜ್ಯ ಸರ್ಕಾರ ಹಾಗೂ ಇತರರ ವಿರುದ್ಧದ ಅರ್ಜಿ– ನ್ಯಾಯ ಮಂಡಳಿಯ ಆದೇಶದ ಅನುಷ್ಠಾನದ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ.ಎಸ್‌ಡಬ್ಲ್ಯೂಎಲ್ 71 ಎಸ್‌ಬಿಬಿ 80 ದಿ:10–2–1981
2. ಸರ್ಕಾರಿ ಅಧಿಸೂಚನೆ ಸಂಖ್ಯೆ. ಎಸ್‌ಡಬ್ಲ್ಯೂಎಲ್ 241 ಎಸ್‌ಜೆಡಿ 81 ದಿನಾಂಕ:10–08–1983.
3. ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ 1746/96 ತೀರ್ಪು ದಿನಾಂಕ:19–4–1996.
4. ಸರ್ಕಾರಿ ಆದೇಶ ಸಂಖ್ಯೆ.ಮಮಇ 155 ಎಸ್‌ಜೆಡಿ 96 ದಿನಾಂಕ: 29–8–97
5. ಕರ್ನಾಟಕ ಆಡಳಿತ ನ್ಯಾಯಮಂಡಳಿ ಅರ್ಜಿ ಸಂ.1844–55/98 ತೀರ್ಪು ದಿನಾಂಕ:24–09–2000
6. ಕಾನೂನುಕೋಶದ ಮುಖ್ಯಸ್ಥರು, ಮಮ.ಅ.ಇಲಾಖೆ ಇವರ ಓ.ಎಂ.ಸಂಖ್ಯೆ: ಆರ್ ಎಸ್ ಡಬ್ಲ್ಯೂ/ 3513/ಎಲ್‌ಸಿ/2001 ದಿ:12–9–2001.
7. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ ಡಿಡಬ್ಲ್ಯೂಸಿಡಿ/ಕೆಎಟಿ–4/ಅರ್ಜಿ ಸಂಖ್ಯೆ/1844–55/98 ದಿನಾಂಕ:08–01–2004

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರ.ಸಂ.(1)ರ ದಿನಾಂಕ 10–2–1981 ರನ್ವಯ ಕರ್ನಾಟಕ ರಾಜ್ಯ ಮಕ್ಕಳ ಕಲ್ಯಾಣ ಸಮಿತಿ ಮತ್ತು ಮನರಂಜನೆ ಸಂಸ್ಥೆಯನ್ನು ದಿ:16–2–1981 ರಿಂದ ಜಾರಿಗೆ ಬರುವಂತೆ ಅದರ ಆಸ್ತಿ ಮತ್ತು ಋಣ ಮತ್ತು ಸಿಬ್ಬಂದಿ ವರ್ಗವನ್ನು ಸರ್ಕಾರದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ವಿಲೀನಗೊಳಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ(2)ರ ದಿನಾಂಕ:10–08–1983 ರ ಅಧಿಸೂಚನೆಯಲ್ಲಿ ಬಾಲಭವನ ಕಾರ್ಯ ನಿರ್ವಹಿಸುತ್ತಿದ್ದ ಸಿಬ್ಬಂದಿ ವರ್ಗಾವಣೆ ಮತ್ತು ಸಂಸ್ಥೆಯ ಸಿಬ್ಬಂದಿಯನ್ನು ಮತ್ತು ಸಂಸ್ಥೆಯನ್ನು ಈ ನಿಯಮಗಳನ್ನು ರೂಪಿಸಿದ ದಿನಾಂಕದಿಂದ ಸಿಬ್ಬಂದಿ ವರ್ಗದ ಸೇವೆಯನ್ನು ದಿ:10–3–83ರಿಂದ ಜಾರಿಗೆ ಬರುವಂತೆ ಜೇಷ್ಠತೆ, ವೇತನ, ರಜೆ ಮತ್ತು ಪಿಂಚಣಿಗೆ ಪರಿಗಣಿಸುವ ಷರತ್ತಿಗೊಳಪಟ್ಟು ವಿಲೀನಗೊಳಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ.(3)ರ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ. 1746/96 ದಿನಾಂಕ: 19.4.96 ರ ತೀರ್ಪಿನಲ್ಲಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

> It is quite clear from Rule of the Karnataka Women and children`s welfare services (Absorption of employees of the Jawahar Bal Bhavan, Bangalore in the state civil services) Rule, 1983, that on absorption, the services rendered under the Jawahar Bal Bhavan, Bangalore, shall have to the taken into consideration for determining the leave, seniority, pay and pension from the date of the absorption. In other words, from the date of the absorption, the service shall be counted as if he was in service earlier. This has been made clear in several decision of this tribunal and the last one rendered is dated 15th June, 1995 in Application No.2173 of 1995 (N.S.VENKARAM V. STATE AND OTHERS).
>
> Accordingly, this Applicatin is allowed, The Respondents are directed to grant the benefit of the past service to the Applicant as per Rule 4 referred above for the purpose of leave, seniority, pay and pension.

ಮೇಲೆ ಓದಲಾದ ಕ್ರ.ಸಂ. (4)ರ ದಿನಾಂಕ: 29–8–97ರ ಆದೇಶದಲ್ಲಿ ಕರ್ನಾಟಕ ಆಡಳಿತ ಮಂಡಳಿಯ ತೀರ್ಪು ದಿನಾಂಕ: 19–4–96 ರನ್ವಯ ಶ್ರೀ ಪಿ.ಎಸ್.ಕೆ. ಅನ್ಸಾರಿ ನಿವೃತ್ತ ಗೃಪಾಲಕ ಸರ್ಕಾರಿ ಸರ್ಟಿಫೈಡ್ ಸ್ಕೂಲ್, ಬೆಂಗಳೂರು ಇವರಿಗೆ ಕರ್ನಾಟಕ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸೇವೆಗಳು (Absorption of Employees of the Jawahar Balbhavan Bangalore in the states Civil Services) ನಿಯಮಗಳು 1983 ರ ನಿಯಮ 4 ರನ್ವಯ ಇವರ ವಿಲೀನಪೂರ್ವದ ಸೇವೆಯನ್ನು ರಜೆ, ಜೇಷ್ಠತೆ, ವೇತನ, ಮತ್ತು ಪಿಂಚಣಿ ಸೌಲಭ್ಯಗಳಿಗೆ ಪರಿಗಣಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ.(5)ರಲ್ಲಿ, ಶ್ರೀ ವಿಶ್ವನಾಥ್ ಮತ್ತು ಇತರೆ 11 ಜನ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ.1844–55/98 ಕ್ಕೆ ದಿ:20–7–2001ರಂದು ತೀರ್ಪು ನೀಡಿ 1746/96 ಶ್ರೀ ಪಿ.ಎಸ್.ಕೆಅನ್ಸಾರಿ ಇವರ ಪ್ರಕರಣದಲ್ಲಿ ತೀರ್ಪು ನೀಡಿದನ್ವಯ ಹಾಗೂ ಕರ್ನಾಟಕ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸೇವೆಗಳು (Absorption of Employees of the Javahar Balbhavan Bangalore in the State Civil Services) ನಿಯಮಗಳು 1983 ರ ನಿಯಮ 4 ರನ್ವಯ ರಜೆ, ಜೇಷ್ಠತೆ, ವೇತನ ಮತ್ತು ಪಿಂಚಣಿ ಇತರೆ ಸೌಲಭ್ಯಗಳನ್ನು ಪರಿಗಣಿಸಲು ತೀರ್ಪು ನೀಡಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

> "The Applicants are similarly placed as the Applicants in all other cases referred to above. The Applicants are entitled to the benefit under Rule 4 of the Rules. The relief cannot be denied to them. The Counsel for the Applicants has submitted that the Applicants are not seeking any other monitory benefit than what flows from Rule 4 of the Rules. Accordingly, these Applicants are allowed granting the benefit of Rule 4 of Annexure-A2 and the Applicants are entitled to the monitory benefits for 3 years prior to the date of filing of these Applications.

ಮೇಲೆ ಓದಲಾದ ಕ್ರ.ಸಂ.(6) ರ ದಿನಾಂಕ:12–9–2001 ರ ಅಧಿಕೃತ ಜ್ಞಾಪನಾದಲ್ಲಿ, ಕಾನೂನು ಕೋಶದ ಮುಖ್ಯಸ್ಥರು ಈ ಪ್ರಕರಣವು ಉಚ್ಛ ನ್ಯಾಯಾಲಯದಲ್ಲಿ ಅಪೀಲು ಸಲ್ಲಿಸಲು ಅರ್ಹವಾದ ಪ್ರಕರಣವಲ್ಲವೆಂದು ತಿಳಿಸಿದ್ದಾರೆ.

ಮೇಲೆ ಓದಲಾದ ಕ್ರ.ಸಂ.(7) ರ ದಿನಾಂಕ: 08–01–2004 ರ ಪತ್ರದಲ್ಲಿ ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ. 1844–55/98 ಶ್ರೀ ಜಿ.ವಿಶ್ವನಾಥ್ ಮತ್ತು ಇತರರ ವಿರುದ್ಧ ರಾಜ್ಯ ಸರ್ಕಾರ ಮತ್ತು ಇತರರ ವಿರುದ್ಧ ಸಲ್ಲಿಸಿರುವ ಅರ್ಜಿ ಬಗ್ಗೆ ನ್ಯಾಯಮಂಡಳಿಯು ದಿನಾಂಕ: 20–7–2001ರಂದು ತೀರ್ಪು ನೀಡಿರುವಂತೆ ಜವಹರ ಬಾಲಭವನ ಸಂಸ್ಥೆಯು ಸಿಬ್ಬಂದಿಯನ್ನು ಸರ್ಕಾರದ ಸೇವೆಯಲ್ಲಿ ವಿಲೀನಗೊಳಿಸುವ ಕುರಿತು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ ನ್ಯಾಯಾಲಯದ ಆದೇಶದಂತೆ ಆದೇಶ ಹೊರಡಿಸಬೇಕೆಂದು ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ. ಮಮಇ 787 ಎಸ್‌ಜೆಡಿ 2004, ಬೆಂಗಳೂರು ದಿನಾಂಕ: 28ನೇ ಮೇ 2005**

ಶ್ರೀ ಜಿ.ವಿಶ್ವನಾಥ್ ಮತ್ತು ಇತರೆ 11 ಜನರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಸಲ್ಲಿಸಿದ ಅರ್ಜಿ ಸಂಖ್ಯೆ. 1844–55/98 ರಲ್ಲಿ ದಿ:20–7–2001 ರಂದು ನೀಡಿದ ತೀರ್ಪಿನನ್ವಯ ಸದರಿಯವರುಗಳು ಜವಹರ ಬಾಲಭವನದಲ್ಲಿ ಕಾರ್ಯ ನಿರ್ವಹಿಸಿರುವ ಇವರ ವಿಲೀನಪೂರ್ವದ ಸೇವೆಯನ್ನು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸೇವೆಗಳು (Absorption of Employees of the Jawahar Balbhavan Bangalore, in the State Civil Services Rules) ನಿಯಮಗಳು 1983 ರ ನಿಯಮ 4 ರನ್ವಯ ರಜೆ, ಜೇಷ್ಠತೆ, ವೇತನ ಮತ್ತು ವಿಶ್ರಾಂತಿ ವೇತನಗಳಿಗೆ ಈ ಆದೇಶದ ಅನುಬಂಧದಲ್ಲಿ ಅವರ ಹೆಸರಿನ ಮುಂದೆ ತೋರಿಸಿದ ದಿನಾಂಕದಿಂದ ಪರಿಗಣಿಸಲು ಆದೇಶಿಸಿದೆ.

ಹಾಗೂ ಇದೇ ನಿಯಮಾವಳಿಯ ನಿಯಮ 4 ರನ್ವಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಲ್ಲಿಸಿದ ದಿನಾಂಕದಿಂದ ಮೂರು ವರ್ಷಗಳ ಹಿಂದಿನಿಂದ ಆರ್ಥಿಕ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆ.

ಈ ಆದೇಶವನ್ನು ಸಿಆಸು ಇಲಾಖೆ ಟಿಪ್ಪಣಿ ಸಂಖ್ಯೆ. ಸಿಆಸುಇ 45 ಸೇನೆಡಿ 2004 ದಿ:10-5-2004, ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ. ಆಇ 281 ವೆಚ್ಚ 3/2004 ದಿ:16-11-2004 ಮತ್ತು ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ: 923/ಅಭಿ/2004 ದಿ:4-7-2005ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪ್ರ.ದ. ಸಿದ್ಧಾಂತಿ**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ ಮಮಇ 787 ಎಸ್‌ಜೆಡಿ 2004 ದಿ:28-05-2005**

| ಕ್ರ. ಸಂ. | ಹೆಸರು ಶ್ರೀ/ಶ್ರೀಮತಿ | ಅರ್ಜಿ ಸಂಖ್ಯೆ | ನೇಮಕ ಹೊಂದಿದ ದಿನಾಂಕ | ನೇಮಕ ಹೊಂದಿದ ಹುದ್ದೆ | ಸರ್ಕಾರಿ ಸೇವೆಗೆ ವಿಲೀನಗೊಳಿಸಿದ ದಿನಾಂಕ |
|---|---|---|---|---|---|
| 1. | ಸಿ.ಜಿ.ವಿಶ್ವನಾಥ್ | 1844/98 | 29-10-78 | ಎಲಕ್ಟ್ರಿಶಿಯನ್ | 29-10-1978 |
| 2. | ಎಂ.ಬಸವಣ್ಣ | 1845/98 | 05-02-76 | ಡ್ರೈವರ್ | 02-04-1977 |
| 3. | ಎ.ಜೇವಿಯರ್ | 1846/98 | 01-04-72 | ಗ್ಯಾಂಗ್‌ಮನ್ | 01-04-1977 |
| 4. | ಎಂ.ನಾಗರಾಜ್ | 1847/98 | 27-12-74 | ಎಲಕ್ಟ್ರಿಶಿಯನ್ | 01-04-1976 |
| 5. | ವಿ.ಕೃಷ್ಣಪ್ಪ | 1848/98 | 02-04-71 | ದಲಾಯತ್ | 02-04-1971 |
| 6. | ಎನ್.ನಾರಾಯಣ | 1849/98 | 01-09-74 | ಸಹಾಯಕ ಪ್ರೊಜೆಕ್ಷನಿಸ್ಟ್ | 01-04-1977 |
| 7. | ನಂಜುಂಡಪ್ಪ | 1850/98 | 27-12-74 | ಕಾವಲುಗಾರ | 01-06-1978 |
| 8. | ಮರಿಯಪ್ಪ.ಹೆಚ್. | 1851/98 | 13-07-71 | ತೋಟಗಾರ | 01-04-1977 |
| 9. | ದಾಸಪ್ಪ | 1852/98 | 16-07-75 | ತೋಟಗಾರ | 01-04-1977 |
| 10. | ಮುನಿಯಪ್ಪ | 1853/98 | 01-04-77 | ತೋಟಗಾರ | 01-04-1977 |
| 11. | ಅಮಲ | 1856/98 | 22-05-79 | ಸ್ವೀಪರ್ | 01-07-1979 |
| 12. | ಎ.ಎಸ್.ಪಾಟೀಲ್ | 1855/98 | 13-03-79 | ಪ್ರೊಜೆಕ್ಷನಿಸ್ಟ್ | 01-11-1979 |

**ಪ್ರ.ದ. ಸಿದ್ಧಾಂತಿ**
ಪಿ.ಆರ್. 825 ಸರ್ಕಾರದ ಅಧೀನ ಕಾರ್ಯದರ್ಶಿ-2, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ENERGY SECRETARIAT

**Sub:** Transfer of 2.5 M.W. Wind Power Capacity in favour of M/s Siddhayu Ayurvedic Research Foundation Private Limited - Orders relating to:

**Read:**
1. Government Order No: DE 26 NCE 1999 dated: 13.5.1999.
2. Government Order No: EN 346 NCE 2004 dated: 09.11.2004.
3. Letter No. KRED/08/SARFPL/2005/993 dated 31.5.2005 received from the MD, KREDL, Bangalore.

**Preamble:-**

In the Government Order dated 09.11.2004 read at (2) above, sanction has been accorded for implementation of 18.75 M.W. capacity Wind Power Project at Bellary District, Hadagali Taluk, Devgoundanahalli Village to M/s Suzlon Energy Limited.

Now, the Managing Director, Karnataka Renewable Energy Development Limited, Bangalore in his letter dated 31.5.2005 read at (3) above has recommended to the Government for transfer of 2.5 M.W. Wind Power capacity in favour of M/s Siddhayu Ayurvedic Research Foundation Private Limited, at Bellary District, Hadagali Taluk, Devgoundanahalli Village from out of the sanctioned 18.75 M.W. capacity of M/s Suzlon Energy Limited.

The proposal has been examined and pass the following order:

**Government Order No. EN 153 NCE 2005, Bangalore, Dated: 9th June 2005**

Government are pleased to accord sanction for transfer of 2.5 M.W. Wind Power capacity in favour of M/s Siddayu Ayurvedic Research Foundation Private Limited, at Bellary District, Hadagali Taluk, Devgoundanahalli village from out of the sanctioned 18.75 M.W. capacity of M/s Suzlon Energy Limited. allotted in Government Order DE 346 NCE 2004 dated 09.11.2004.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka,
P.R. 826 **SURESH .B. KRISHNAPPANAVAR**
Under Secretary to Government, Energy Department.

**ಇಂಧನ ಸಚಿವಾಲಯ**

**ವಿಷಯ:** ಮೆ: ಸ್ವಾರ್ಪ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 5 ಮೆಗಾ ವ್ಯಾಟ್ ಸಾಮರ್ಥ್ಯದ ರೋಡಲ್ ಬಂಡ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 363 ಎನ್‌ಸಿಇ 04, ದಿನಾಂಕ: 5.1.2005 (ಪುಟ 17)
2. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ:ಇಎನ್/363/ಎನ್‌ಸಿಇ 2004 ದಿನಾಂಕ: 18.4.2005. (ಪುಟ 28).
3. ಮೆ: ಸ್ವಾರ್ಪ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಪತ್ರ ದಿನಾಂಕ: 20.4.05. (ಪುಟ 31).

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: ಸ್ವಾರ್ಪ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ರೋಡಲ್ ಬಂಡ ಬಳಿ ನಾರಾಯಣಪುರ ಅಣೆಕಟ್ಟಿನಲ್ಲಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೆ: ಪ್ರಭಾಕರ ಪವರ್ ಪ್ರಾಜೆಕ್ಟ್ಸ್ ಲಿಮಿಟೆಡ್ ಈ ಕಂಪನಿಗೆ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮತ್ತೊಂದು ಅವಕಾಶವನ್ನು ನೀಡುವ ಉದ್ದೇಶದಿಂದ ಓದಲಾದ (2)ರ ನೋಟಿಸಿನಲ್ಲಿ ಮೆ: ಸ್ವಾರ್ಪ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾದ 5 ಮೆಗಾ ವ್ಯಾಟ್ ಸಾಮರ್ಥ್ಯದ ರೋಡಲ್ ಬಂಡ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದು ಮಾಡಬಾರದು? ಎಂಬ ಬಗ್ಗೆ ಕಾರಣವನ್ನು ಕೇಳಲಾಗಿತ್ತು.

ಓದಲಾದ (3)ರ ಪತ್ರದಲ್ಲಿ ಸದರಿ ನೋಟಿಸಿಗೆ ಮೆ: ಸ್ವಾರ್ಪ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಸರ್ಕಾರಕ್ಕೆ ಉತ್ತರವನ್ನು ನೀಡಿ ಯೋಜನೆಯನ್ನು ರದ್ದು ಮಾಡಬಾರದಾಗಿ ಕೋರಿರುತ್ತಾರೆ. ಸದರಿ ಉತ್ತರವನ್ನು ಪರಿಶೀಲಿಸಿ ಸರ್ಕಾರವು ಮೆ: ಪ್ರಭಾಕರ ಪವರ್ ಪ್ರಾಜೆಕ್ಟ್ಸ್ ಲಿಮಿಟೆಡ್ ಈ ಕಂಪನಿಗೆ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮತ್ತೊಂದು ಅವಕಾಶವನ್ನು ನೀಡುವ ಉದ್ದೇಶದಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 363 ಎನ್‌ಸಿಇ 2004, ಬೆಂಗಳೂರು, ದಿನಾಂಕ: 8ನೇ ಜೂನ್ 2005**

ಮೆ: ಸ್ವಾರ್ಪ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಸರ್ಕಾರಿ ಆದೇಶ ಸಂಖ್ಯೆ: ಇಎನ್ 363 ಎನ್‌ಸಿಇ 2004 ದಿನಾಂಕ: 5.1.2005ರಲ್ಲಿ ರಾಯಚೂರು ಜಿಲ್ಲೆಯ ರೋಡಲ್ ಬಂಡದ ನಾರಾಯಣಪುರ ಅಣೆಕಟ್ಟಿನಲ್ಲಿ ಹಂಚಿಕೆ ಮಾಡಲಾಗಿರುವ 5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ ಇಎನ್ 369 ಎನ್‌ಸಿಇ 2004 ದಿನಾಂಕ: 8.12.2004ರಲ್ಲಿ ಮೆ: ಎ. ಪ್ರಭಾಕರ್ ರೆಡ್ಡಿ ಅಂಡ್ ಕಂಪನಿ, ಹೈದರಾಬಾದ್, ಇವರಿಗೆ ನಾರಾಯಣಪುರ ಡ್ಯಾಮ್ ಸಮೀಪ ರೋಡಲ್‌ಬಂಡ, ರಾಯಚೂರು, ಇಲ್ಲಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯನ್ನು ರದ್ದು ಪಡಿಸಿರುವ ಆದೇಶವನ್ನು ಹಿಂದಕ್ಕೆ ಪಡೆಯಲಾಗಿದೆ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಡಿಇ 125 ಎನ್‌ಸಿಇ 96 (14) ದಿನಾಂಕ: 10.6.97ನ್ನು ಉಳಿಸಿಕೊಳ್ಳಲಾಗಿದೆ (Restored).

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 827

**ENERGY SECRETARIAT**

**Sub:** Transfer of 0.8 M.W. Wind Power Capacity in favour of M/s Amrit Bottlers (P) Limited - Orders relating to:

**Read:** 1. Government Order No: DE 26 NCE 1999 dated: 13.5.1999.
2. Government Order No: EN 76 NCE 2005 dated: 18.3.2005.
3. Letter No. KRED/08/ABPL/2005/980 dated 24/28.5.2005 received from the MD, KREDL, Bangalore.

**Preamble:-**

In the Government Order dated 18.3.2005 read at (2) above, sanction has been accorded for implementation of 192 M.W. capacity Wind Power Project at Jogimatti Wind Zone, Chitradurga, District to M/s Enercon India Ltd.

Now, the Managing Director, Karnataka Renewable Energy Development Limited, Bangalore in his letter dated 24/28.5.2005 read at (3) above, has recommended to the Government for transfer of 0.8 M.W. Wind Power capacity in favour of M/s Amrit Bottlers (P) Limited, at Lakkihalli village, Hiriyur Taluk, Chitradurga District from out of the sanctioned 192 M.W. capacity of M/s Enercon India Limited.

The proposal has been examined and pass the following order:

**Government Order No. EN 148 NCE 2005, Bangalore, Dated: 9th June 2005**

Government are pleased to accord sanction for transfer of 0.8 M.W. Wind Power capacity in favour of M/s Amrit Bottlers (P) Limited at Lakkihalli village, Hiriyur Taluk, Chitradurga District from out of the sanctioned 192 M.W. capacity of M/s Enercon India Ltd. allotted in Government Order DE 76 NCE 2005 dated 18.3.2005.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka,
**SURESH .B. KRISHNAPPANAVAR**
Under Secretary to Government, Energy Department.

P.R. 828

**Sub:** Transfer of 1.25 M.W. Wind Power Capacity in favour of M/s Mahalaxmi Commercial Services Limited - Orders relating to:

**Read:** 1. Government Order No: DE 26 NCE 1999 dated: 13.5.1999.
2. Government Order No: EN 346 NCE 2004 dated: 09.11.2004.
3. Letter No. KRED/08/MCSL/2005/991 dated 31.5.2005 received from the MD, KREDL, Bangalore.

**Preamble:-**

In the Government Order dated 9.11.2004 read at (2) above, sanction has been accorded for implementation of 18.75 M.W. capacity Wind Power Project at Bellary District, Gujanur, Nagtibassapur Village to M/s Suzlon Energy Limited.

Now, the Managing Director, Karnataka Renewable Energy Development Limited, Bangalore in his letter dated 31.5.2005 read at (3) above, has recommended to the Government for transfer of 1.25 M.W. Wind Power capacity in favour of M/s Mahalaxmi Commercial Services Limited, at Bellary District, Gujanur, Nagtibassapur Village from out of the sanctioned 18.75 M.W. capacity of M/s Suzlon Energy Limited.

The proposal has been examined and pass the following order:

**Government Order No. EN 152 NCE 2005, Bangalore, Dated: 9th June 2005**

Government are pleased to accord sanction for transfer of 1.25 M.W. Wind Power capacity in favour of M/s Mahalaxmi Commercial Services Limited, at Bellary District, Gujanur, Nagtibassapur Village from out of the sanctioned 18.75 M.W. capacity of M/s Suzlon Energy Limited, allotted in Government Order DE 346 NCE 2004 dated 9.11.2004.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka,

P.R. 829

**SURESH .B. KRISHNAPPANAVAR**

Under Secretary to Government, Energy Department.

**Sub:** Transfer of 0.8 M.W. Wind Power Capacity in favour of M/s Mumbai Stock Brokers (P) Limited - Orders relating to:

**Read:** 1. Government Order No: DE 26 NCE 1999 dated: 13.5.1999.
2. Government Order No: EN 76 NCE 2005 dated: 18.3.2005.
3. Letter No. KRED/08/MSBPL/2005/979 dated 24/28.5.2005 received from the MD, KREDL, Bangalore received from the MD, KREDL, Bangalore.

**Preamble:-**

In the Government Order dated 18.3.2005 read at (2) above, sanction has been accorded for implementation of 192 M.W. capacity Wind Power Project at Jogimatti Wind Zone, Chitradurga, District, to M/s Enercon India Ltd.

Now, the Managing Director, Karnataka Renewable Energy Development Limited, Bangalore in his letter dated 24/28.5.2005 read at (3) above, has recommended to the Government for transfer of 0.8 M.W. Wind Power capacity in favour of M/s Mumbai Stock Brokers (P) Limited, at Kereyagahalli village Hiriyur Taluk, Chitradurga District, from out of the sanctioned 192 M.W. capacity of M/s Enercon India Limited.

The proposal has been examined and pass the following order:

**Government Order No. EN 146 NCE 2005, Bangalore, Dated: 9th June 2005**

Government are pleased to accord sanction for transfer of 0.8 M.W. Wind Power capacity in favour of M/s Mumbai Stock Brokers (P) Limited at Kereyagahalli Village, Hiriyur Taluk, Chitradurga District from out of the sanctioned 192 M.W. capacity of M/s Enercon India Ltd. allotted in Government Order DE 76 NCE 2005 dated 18.3.2005.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka,

P.R. 830

**SURESH .B. KRISHNAPPANAVAR**

Under Secretary to Government, Energy Department.

**Sub:** Transfer of 1.6 M.W. Wind Power Capacity in favour of M/s Prasad Technology Park (P) Limited - Orders relating to:

**Read:**
1. Government Order No: DE 26 NCE 1999 dated: 13.5.1999.
2. Government Order No: EN 76 NCE 2005 dated: 18.3.2005.
3. Letter No. KRED/08/PTPPL/2005/977 dated 25/28.5.2005 received from the MD, KREDL, Bangalore.

**Preamble:-**

In the Government Order dated 18.3.2005 read at (2) above, sanction has been accorded for implementation of 192 M.W. capacity Wind Power Project at Jogimatti Wind Zone, Chitradurga, District, to M/s Enercon India Ltd.

Now, the Managing Director, Karnataka Renewable Energy Development Limited, Bangalore in his letter dated 25/28.5.2005 read at (3) above, has recommended to the Government for transfer of 1.6 M.W. Wind Power capacity in favour of M/s Prasad Technology Park (P) Limited, at Lakkihalli village, Hiriyur Taluk, Chitradurga District, from out of the sanctioned 192 M.W. capacity of M/s Enercon India Limited.

The proposal has been examined and pass the following order:

**Government Order No. EN 149 NCE 2005, Bangalore, Dated: 9th June 2005**

Government are pleased to accord sanction for transfer of 1.6 M.W. Wind Power capacity in favour of M/s Prasad Technology Park (P) Limited at Lakkihalli village, Hiriyur Taluk, Chitradurga District from out of the sanctioned 192 M.W. capacity of M/s Enercon India Ltd. allotted in Government Order DE 76 NCE 2005 dated 18.3.2005.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka,

P.R. 831

**SURESH .B. KRISHNAPPANAVAR**

Under Secretary to Government, Energy Department.

**Sub:** Transfer of 0.8 M.W. Wind Power Capacity in favour of M/s Neharaj Energy - Orders relating to:

**Read:**
1. Government Order No: DE 26 NCE 1999 dated: 13.5.1999.
2. Government Order No: EN 76 NCE 2005 dated: 18.3.2005.
3. Letter No. KRED/08/NE/2005/976 dated 25/28.5.2005 received from the MD, KREDL, Bangalore.

**Preamble:-**

In the Government Order dated 18.3.2005 read at (2) above, sanction has been accorded for implementation of 192 M.W. capacity Wind Power Project at Jogimatti Wind Zone, Chitradurga, District, to M/s Enercon India Ltd.

Now, the Managing Director, Karnataka Renewable Energy Development Limited, Bangalore in his letter dated 25/28.5.2005 read at (3) above, has recommended to the Government for transfer of 0.8 M.W. Wind Power capacity in favour of M/s Neharaj Energy, at Lakkihalli village, Hiriyur Taluk, Chitradurga District, from out of the sanctioned 192 M.W. capacity of M/s Enercon India Limited.

The proposal has been examined and pass the following order:

**Government Order No. EN 147 NCE 2005, Bangalore, Dated: 9th June 2005**

Government are pleased to accord sanction for transfer of 0.8 M.W. Wind Power capacity in favour of M/s Neharaj Energy at Lakkihalli village, Hiriyur Taluk, Chitradurga District from out of the sanctioned 192 M.W. capacity of M/s Enercon India Ltd. allotted in Government Order DE 76 NCE 2005 dated 18.3.2005.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka,

P.R. 832

**SURESH .B. KRISHNAPPANAVAR**

Under Secretary to Government, Energy Department.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಕೆ.ದೇವರಾಜ್, ಪಿಸಿ 520, 4ನೇ ಪಡೆ, ಕೆಎಸ್‌ಆರ್‌ಪಿ., ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 4ನೇ ಪಡೆ ಕೆಎಸ್‌ಆರ್‌ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ:/ಸಿಬ್ಬಂದಿ1/4 ಕರಾಮೀಪೊ/ಇವಿ-8/90-91.ದಿನಾಂಕ:23-11-1993.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಐಜಿಪಿ, ಕರಾಮೀಪೊ, ಬೆಂಗಳೂರು ಇವರ ಆದೇಶ ಸಂಖ್ಯೆ:9/ಡಿಇ/98-99,ಓಬಿ ಸಂ:277/98-99 ದಿನಾಂಕ:22-09-1998.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:21-01-2001.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 4/20/2000-01, ದಿನಾಂಕ:07-02-2005.

**ಪ್ರಸ್ತಾವನೆ:**

ಶ್ರೀ ಕೆ. ದೇವರಾಜು ಮಾಜಿ ಪಿಸಿ 520 ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 4ನೇ ಪಡೆಯ `ಡಿ` ದಳ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:** ``1.ಕರಾಮಿಪೊ, 4ನೇ ಪಡೆಯ `ಡಿ` ದಳದಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ದೇವರಾಜು, ಪಿಸಿ 520 ಆದ ನೀವು (1) ದಿನಾಂಕ:01-02-1990 ರಂದು ಸಂಬಂಧಪಟ್ಟ ದಳದಿಂದ ಖಾಯಿಲೆ ವಿಶ್ರಾಂತಿ ಪುಸ್ತಕವನ್ನು ಪಡೆದುಕೊಂಡು ಹೋಗಿ ಖಾಯಿಲೆ ವಿಶ್ರಾಂತಿ ಪುಸ್ತಕವನ್ನು ಮರಳಿ ದಳಕ್ಕೆ ತಲುಪಿಸಿರುವುದಿಲ್ಲ. ಹಾಗೂ ಯಾವುದೇ ತರಹದ ವಿಷಯವನ್ನು ಸಹ ತಿಳಿಸದೆ ಗೈರು ಹಾಜರಿಯಾಗಿದ್ದೀರಿ.

2. ಕಮಾಂಡೆಂಟ್,4ನೇ ಪಡೆಯ ಕಚೇರಿಯಿಂದ ದಿನಾಂಕ:14-03-1990 ರಂದು ಪರಿತ್ಯಾಗ ಸೂಚನೆ ಪತ್ರವನ್ನು ಹೊರಡಿಸಲಾಗಿದ್ದು, ಅದನ್ನು ಸ್ವೀಕರಿಸಿದ ಪತ್ರವು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ ಇವರಿಂದ ದಿನಾಂಕ:19-07-1990 ರಂದು ಬಂದಿರುತ್ತದೆ. ನೀವು ಪರಿತ್ಯಾಗ ಸೂಚನಾ ಪತ್ರವನ್ನು ಪಡೆದು ಕೊಂಡಿದ್ದರೂ ಸಹ ಕರ್ತವ್ಯಕ್ಕೆ ಹಾಜರಾಗದೆ ಗೈರುಹಾಜರಿಯನ್ನೇ ಮುಂದುವರೆಸಿಕೊಂಡು ಬರುತ್ತಿರುವುದು, ನೀವು ಕರ್ತವ್ಯದಲ್ಲಿಟ್ಟಿರುವ ಅಶಿಸ್ತು ಬೇಜವಾಬ್ದಾರಿ, ನಿರ್ಲಕ್ಷತೆಯನ್ನು ತೋರಿಸಿರುವುದು ವ್ಯಕ್ತವಾಗುತ್ತದೆ.''

ಮೇಲ್ಕಂಡ ಆರೋಪದ ಬಗ್ಗೆ ಇಲಾಖಾ ವಿಚಾರಣೆ ನಡೆಸಿ, ಅರ್ಜಿದಾರರು ಸಮಜಾಯಿಷಿ ನೀಡದೇ ಇದ್ದುದರಿಂದ ಏಕ ಪಕ್ಷೀಯವಾಗಿ ತೀರ್ಮಾನ ಕೈಗೊಂಡು, ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 4ನೇ ಪಡೆ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:23-11-1993ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿ, ಅನಧಿಕೃತ ಗೈರುಹಾಜರಿ ಅವಧಿಯನ್ನು ವೇತನ ರಹಿತ ರಜೆಯೆಂಬ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಮೇಲ್ಮನವಿ ಸಲ್ಲಿಸಿದ್ದು, ಅರ್ಜಿದಾರರ ಕಾಯಿಲೆಗೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅರ್ಜಿದಾರರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸಿ, ಅನಧಿಕೃತ ಗೈರು ಹಾಜರಿಯನ್ನು (ಖಾಯಿಲೆ ರಜೆಯನ್ನು ವೇತನ ರಹಿತ ರಜೆ ಎಂದೂ, ಈ ಅವಧಿಯನ್ನು ಸೇವೆಯಿಂದ ಹೊರಗುಳಿದ ಅವಧಿಯೆಂದು ಹಾಗೂ ಈ ಅವಧಿ ಜೇಷ್ಠತೆಗೆ ಪರಿಗಣಿಸಲು ಬರುವುದಿಲ್ಲವೆಂದು ಮೇಲೆ ಕ್ರಮ ಸಂಖ್ಯೆ;(2)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿ ಪ್ರಾಧಿಕಾರಿ ದಂಡನೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಸಲ್ಲಿಸಿರುತ್ತಾರೆ. ಇಲಾಖಾ ವಿಚಾರಣೆ ದಾಖಲೆಗಳನ್ನು ಸೇವಾ ಪುಸ್ತಕವನ್ನು ಹಾಗೂ ಕಂಡಿಕಾವಾರು ಷರಾಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮನ್ನು ಸೇವೆಯಿಂದ ವಜಾ ಮಾಡುವ ಪೂರ್ವದಲ್ಲಿ ಕರ್ತವ್ಯ ಪರಿತ್ಯಾಗ ಎಚ್ಚರಿಕೆ ಪತ್ರವನ್ನು ಪಡೆದಿದ್ದರೂ, ಕರ್ತವ್ಯಕ್ಕೆ ಹಾಜರಾಗದೆ ಇದ್ದು, ಇಲಾಖಾ ವಿಚಾರಣೆಯ ವರದಿಯ ಆಧಾರದ ಮೇಲೆ ವಿಚಾರಣಾಧಿಕಾರಿಯ ವರದಿಯ ಮೇಲೆ ಸಮಜಾಯಿಷಿ ಕೋರಿದ್ದರೂ, ಉತ್ತರ ನೀಡದೆ, ಕರ್ತವ್ಯದಲ್ಲಿ ಅತೀವ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತಾರೆ. ಆದರೂ ಸಹ ಮೇಲ್ಮನವಿ ಪ್ರಾಧಿಕಾರಿಯವರು, ಇವರಿಗೊಂದು ಅವಕಾಶ ನೀಡಲು ಶಿಸ್ತು ಪ್ರಾಧಿಕಾರಿಯ ಆದೇಶವನ್ನು ರದ್ದು ಪಡಿಸಿ, ಶ್ರೀ ದೇವರಾಜು ರವರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸಿ, ಅನಧಿಕೃತ ಖಾಯಿಲೆ ಗೈರುಹಾಜರಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಿ, ಸೇವೆಯಿಂದ ಹೊರಗುಳಿದ ಅವಧಿಯನ್ನು ಹಾಗೆ ಪರಿಗಣಿಸಿ, ಈ ಅವಧಿಯು ಯಾವುದೇ ಜೇಷ್ಠತೆಗೆ ಪರಿಗಣಿಸಲು ಬರುವುದಿಲ್ಲವೆಂದು ಆದೇಶಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಮೇಲ್ಮನವಿ ಪ್ರಾಧಿಕಾರಿಯ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯವಿಲ್ಲವೆಂದು ಪರಿಗಣಿಸುತ್ತಾ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 30 ಪೊಸಿಅ 2001 ಬೆಂಗಳೂರು, ದಿನಾಂಕ: 21ನೇ ಮೇ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ದೇವರಾಜ್ ಪಿಸಿ 520, 4ನೇ ಪಡೆ KSRP ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 833

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಗೌರಿಶಂಕರ, ಸಿಪಿಸಿ-2152 ಸಂಚಾರಿ ಪೊಲೀಸ್ ಠಾಣೆ, ಗುಲ್ಬರ್ಗಾ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ SP ಗುಲ್ಬರ್ಗಾ ಇವರ ಆದೇಶ ಸಂಖ್ಯೆ:/ಸಿಬ್ಬಂದಿ/8/ಎಲ್‌ಡಬ್ಲ್ಯುಎ/641/2001,ಡಿಓಬಿ ಸಂಖ್ಯೆ:2186/2001.ದಿನಾಂಕ:16-10-2001.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಐಜಿಪಿ, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು/74/ಈವ/2001 ದಿನಾಂಕ:21-03-2003.ಆಪು ಸಂಖ್ಯೆ:180/ಈವ/2002.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:09-10-2003. ಹಾಗೂ 27-05-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:51/ಸಿಬ್ಬಂದಿ-7/2004-05.ದಿನಾಂಕ:17-01-2005.

**ಪ್ರಸ್ತಾವನೆ:**

ಶ್ರೀ ಗೌರಿ ಶಂಕರ ಸಿಪಿಸಿ 2152, ಸಂಚಾರಿ ಪೊಲೀಸ್ ಠಾಣೆ ಗುಲಬರ್ಗಾ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದಿನಾಂಕ:03-04-2001 ರಿಂದ 21-05-2001 ರವರೆಗೆ 49 ದಿನಗಳ ಅನಧಿಕೃತ ಗೈರುಹಾಜರಿ ಆಗಿದ್ದರಿಂದ, ಶಿಸ್ತು ಪ್ರಾಧಿಕಾರಿ ಹಾಗೂ ಎಸ್‌ಪಿ ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ತಮ್ಮ ಆದೇಶದಲ್ಲಿ ಅರ್ಜಿದಾರರ ಈ ಅನಧಿಕೃತ ಗೈರು ಹಾಜರಿ ಅವಧಿಯನ್ನು `ವೇತನ ರಹಿತ ರಜೆ` ಎಂದು ಪರಿಗಣಿಸಿ ಲಘು ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಮೇಲ್ಮನವಿಯನ್ನು ಪರಿಶೀಲಿಸಿ, ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಅಂಶಗಳೇನೂ ಇಲ್ಲವೆಂದು ಪರಿಗಣಿಸಿ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಐಜಿಪಿ, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:21-03-2003ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ದ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಪರಿಶೀಲಿಸಿದ ನಂತರ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸಬಹುದಾದಂತಹ ಹೊಸ ಅಂಶಗಳೇನೂ ಇಲ್ಲವೆಂದು ಪರಿಗಣಿಸಿ, ಹಾಗೂ ಶಿಸ್ತು ಪ್ರಾಧಿಕಾರಿಯ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯವಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 124 ಪೊಸಿಅ 2005 ಬೆಂಗಳೂರು ದಿನಾಂಕ: 01ನೇ ಜೂನ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ, 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗೌರಿಶಂಕರ, ಸಿಪಿಸಿ 2152 ಸಂಚಾರಿ ಪೊಲೀಸ್ ಠಾಣೆ, ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 834

**ವಿಷಯ:** ಶ್ರೀ ಕೆ.ಮಗೇಂದ್ರನ್. ಎ.ಪಿ.ಸಿ. 364, ಹಿಂದೆ ಸಿ.ಎ.ಆರ್. ಕೇಂದ್ರ ಹಾಲಿ ಕೇಂದ್ರ ಕಾರಾಗೃಹ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಡಿಸಿಪಿ,ಸಿಎಆರ್(ಕೇಂದ್ರ) ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ/50/2000-01/ ಮತ್ತು ಆಪು ಸಂಖ್ಯೆ:1/2002. ದಿನಾಂಕ:09-05-2002.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮಿಷನರ್, (ಆಡಳಿತ ಮತ್ತು ಸಿಎಆರ್) ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:12/ಅಪೀಲು/2002-03. ದಿನಾಂಕ:24-10-2002, ಓಬಿ ಸಂಖ್ಯೆ: 573/02.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10-01-2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/113/2002-03. ದಿನಾಂಕ:11-11-2003.

**ಪ್ರಸ್ತಾವನೆ:**

ಶ್ರೀ ಮಗೇಂದ್ರನ್, ಎಪಿಸಿ-364 `ಸಿ' , ವಿಭಾಗ, ಸಿಎಆರ್ (ಕೇಂದ್ರ) ಬೆಂಗಳೂರು, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ದ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡುವಳಿ) ನಿಯಮಾವಳಿ 1965ರ ನಿಯಮ 6 ರಡಿಯಲ್ಲಿ ಇಲಾಖೆ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**1) ಪಿಸಿ 364 "ಸಿ" ವಿಭಾಗ, ಸಿಎಆರ್(ಕೇಂದ್ರ) ಬೆಂಗಳೂರು, ಆದ ನೀವು 15-02-2002ರಿಂದ 25.02.2001ರ ವರೆವಿಗೆ 11 ದಿವಸ ಕರ್ತವ್ಯಕ್ಕೆ ಯಾರಿಗೂ ಸೂಚನೆ ನೀಡದೆ ಅನಧಿಕೃತವಾಗಿ ಗೈರುಹಾಜರಾಗಿರುತ್ತೀರಿ.

2) ನೀವು ಶಿಸ್ತಿನ ಇಲಾಖೆಯಲ್ಲಿನ ಕರ್ತವ್ಯ ನಿರ್ವಹಿಸುತ್ತಿದ್ದು ಕರ್ತವ್ಯಕ್ಕೆ ಗೈರುಹಾಜರಾಗುವ ಮುಂಚೆ ನಿಮ್ಮ ಮೇಲಾಧಿಕಾರಿಗಳಿಗೆ ಯಾವ ರೀತಿ ಮಾಹಿತಿಯನ್ನು ನೀಡದೆ ಅಥವಾ ನಿಮಗೆ ಯಾವುದೇ ವೈದ್ಯಕೀಯ ಚಿಕಿತ್ಸೆ ಬೇಕಾದಲ್ಲಿ ಎಂ.ಹೆಚ್.ಎಸ್.ಪಡೆದು ಸಿಕ್

ರಜೆಯನ್ನು ತೆಗೆದುಕೊಂಡು ಹೋಗದೆ ಕರ್ತವ್ಯಕ್ಕೆ ಗೈರುಹಾಜರಾಗಿ ಅಶಿಸ್ತು ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ. ಇದು ನಿಮ್ಮ ವರ್ತನೆಯು ಇತರೆ ಪೊಲೀಸ್ ಸಿಬ್ಬಂದಿಗಳ ಮೇಲೆಯೂ ಸಹ ದುಷ್ಪರಿಣಾಮ ಬೀರುವುದಾಗಿರುತ್ತದೆ.

ಮೇಲ್ಕಂಡ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ ಎಂಬ ಇಲಾಖಾ ವಿಚಾರಣೆ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು,ಸಿಎಆರ್(ಕೇಂದ್ರ) ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:09:05:2002ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪಿಸಿ ಹುದ್ದೆಯ ಕನಿಷ್ಟ ಮಟ್ಟಕ್ಕೆ ಇಳಿಸಿ,ವಾರ್ಷಿಕ ವೇತನ ಬಡ್ತಿಯನ್ನು ಹೊಸದಾಗಿ ಪಡೆಯುವಂತೆ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿ,ಯಾವುದೇ ಮುನ್ಸೂಚನೆ ನೀಡದೇ ಕರ್ತವ್ಯಕ್ಕೆ ಗೈರುಹಾಜರಾಗಿರುವುದು ಇಲಾಖೆ ವಿಚಾರಣೆಯಲ್ಲಿ ಯಾವುದೇ ಸಂಶಯಕ್ಕೆ ಎಡೆ ಮಾಡಿಕೊಡದೆ ಸಾಬೀತಾಗಿರುವುದರಿಂದ ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆ ಸಮಂಜಸವಾಗಿದೆಯೆಂದು ಪರಿಗಣಿಸಿ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಆಯುಕ್ತರು,(ಆಡಳಿತ ಮತ್ತು ಸಿಎಆರ್) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:24-10-2002ರ ಆದೇಶದಲ್ಲಿ ಅರ್ಜಿದಾರರ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಸಲ್ಲಿಸಿದ ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಯಿತು. ಪೊಲೀಸ್ ಇಲಾಖೆಯು ಒಂದು ಶಿಸ್ತಿನ ಇಲಾಖೆಯಾಗಿದ್ದು, ಅಧಿಕಾರಿಗಳು ಅಥವಾ ಸಿಬ್ಬಂದಿಗಳು ಕಛೇರಿಯ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಾಗುವುದನ್ನು ಲಘುವಾಗಿ ಪರಿಗಣಿಸಲಾಗುವುದಿಲ್ಲ. ಅಲ್ಲದೆ ಶಿಸ್ತು ಪ್ರಾಧಿಕಾರಿಯು ದಿನಾಂಕ: 26-04-2002 ರಂದು ಹೊರಡಿಸಿರುವ ದಂಡನಾದೇಶದಲ್ಲಿ ಸದರಿ ನೌಕರರ ವೇತನವನ್ನು ಪಿಸಿ ಹುದ್ದೆಯ ಕನಿಷ್ಟ ಮಟ್ಟಕ್ಕೆ ಇಳಿಸಿ ವಾರ್ಷಿಕ ವೇತನ ಬಡ್ತಿಯನ್ನು ಹೊಸದಾಗಿ ಪಡೆಯುವಂತೆ ಆದೇಶಿಸಿದ್ದಾರೆ. ಅಂದರೆ ನೌಕರರು ದಂಡನೆಯ ಆದೇಶವನ್ನು ಹೊರಡಿಸಿದ ಒಂದು ವರ್ಷದ ನಂತರ ವಾರ್ಷಿಕ ವೇತನ ಮುಂಬಡ್ತಿಯನ್ನು ಪಡೆಯಲು ಅರ್ಹರಾಗುತ್ತಾರೆ. ಹಾಗೆಯೇ ಪ್ರತಿ ವರ್ಷ ವಾರ್ಷಿಕ ವೇತನ ಮುಂಬಡ್ತಿಯನ್ನು ಪಡೆಯುತ್ತಾರೆ. ಆದುದರಿಂದ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 59 (1)(ಬಿ)ಗೆ ವ್ಯತಿರಕ್ತವಾಗಿರುವುದಿಲ್ಲ. ಈ ಅಂಶಗಳ ಹಿನ್ನೆಲೆಯಲ್ಲಿ, ಶಿಸ್ತು ಪ್ರಾಧಿಕಾರದ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುವುದಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 17 ಪೊಸಿಅ 2003 ಬೆಂಗಳೂರು, ದಿನಾಂಕ:01ನೇ ಜೂನ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್(ಶಿಸ್ತು ನಡವಳಿ) ನಿಯಮಾವಳಿ 1965 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಮಗೇಂದ್ರನ್, ಎಪಿಸಿ,364 ಸಿಎಆರ್ (ಕೇಂದ್ರ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 835

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಎಸ್.ಚಲವಾದಿ, ಪಿ.ಸಿ.1519, ಎಸ್.ಕೆ.ಪಠಾಣ, ಪಿಸಿ 636, ಕೆ.ಐ.ದೇಸಾಯಿ, ಪಿ.ಸಿ. 621 ಮತ್ತು ನದಾಫ್ ಪಿಸಿ 609, ಹೊರ್ತಿ ಪೊಲೀಸ್ ಠಾಣೆ, ವಿಜಾಪುರ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಬಿಜಾಪುರ ಇವರ ಆದೇಶ ಸಂಖ್ಯೆ:ಸಿಬ್ಬಂದಿ 3/ಪಿಆರ್-3/96 ದಿನಾಂಕ:20-12-1997. ಓಬಿ ಸಂಖ್ಯೆ: 400/97.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಐಜಿಪಿ, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ:ಅಪೀಲು/78/ಈವ/2000, ಆಪು ಸಂಖ್ಯೆ:26/ಯುಪ್ವಿ/98/ ದಿನಾಂಕ:20-08-1998,
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10-10-2000.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 6/75/2000-01. ದಿನಾಂಕ:05-12-2001. ಮತ್ತು 07/01/2005.

**ಪ್ರಸ್ತಾವನೆ:**

ಶ್ರೀ ಎಸ್.ಎನ್.ಚಲವಾದಿ ಸಿಪಿಸಿ 1514, ಶ್ರೀ ಎಸ್.ಕೆ.ಪಠಾಣ್ ಸಿಪಿಸಿ 636, ಶ್ರೀ ಎಂ.ಬಿ. ನದಾಫ್ ಸಿಪಿಸಿ 603 ಹಾಗೂ ಶ್ರೀ ಕೆ.ಐ.ದೇಸಾಯಿ ಸಿಪಿಸಿ 621 (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರುಗಳ ವಿರುದ್ಧ ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡುವಳಿ) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:** `` ನೀವು ಹೊರ್ತಿ ಪೊಲೀಸ್ ಠಾಣೆಯಲ್ಲಿ ಸಿಪಿಸಿಯಾಗಿ ಸೇವೆ ಸಲ್ಲಿಸುತ್ತಿದ್ದು, ದಿನಾಂಕ:11-01-1996 ರಂದು ಬೆಳಿಗ್ಗೆ 3-00 ಗಂಟೆಯ ಸುಮಾರಿಗೆ ಯಾವ ಕರ್ತವ್ಯವಿಲ್ಲದಿದ್ದರೂ ಸಹ ಸಮವಸ್ತ್ರದಲ್ಲಿ ವಿಜಾಪುರ-ಸೋಲಾಪುರ NH-13 ನೇದ್ದರ ಕ್ರಾಸಿಗೆ ಸಿಪಿಸಿ-636 ಎಸ್.ಕೆ.ಪಠಾಣ್ ರವರೊಂದಿಗೆ ಬಂದಿದ್ದೀರಿ. ಅಲ್ಲಿ ಹಾಜರಿದ್ದ ಸಿಪಿಸಿ-621 ಕೆ.ಐ. ದೇಸಾಯಿ ಹಾಗೂ ಸಿಪಿಸಿ-

603 ಎಂ.ಬಿ.ನದಾಫ್ ರವರೊಂದಿಗೆ ಕೂಡಿಕೊಂಡು ಬರ ಹೋಗುವ ವಾಹನಗಳಿಂದ ಕಾನೂನು ಬಾಹಿರವಾಗಿ ಎಂಟ್ರಿ ಹಣ ವಸೂಲಿ ಮಾಡುವ ಉದ್ದೇಶದಿಂದ ಸೋಲಾಪುರ ಕಡೆಯಿಂದ ಬಂದ ಒಂದು ಲಾರಿಯಲ್ಲಿ ಕೊಟ್ನಾಳ ಕ್ರಾಸಿಗೆ ಬಂದಿದ್ದೀರಿ. ಅಲ್ಲಿ ನೀವು ವಾಹನ ಚಾಲಕರಿಂದ ಹಣ ವಸೂಲಿ ಮಾಡುತ್ತಿರುವಾಗ ಅಂದು ಬೆಳಿಗ್ಗೆ 3-50 ಗಂಟೆಯ ಸುಮಾರಿಗೆ ಸೋಲಾಪುರದಿಂದ ಬಂದ ಒಂದು ಲಾರಿ ನಂ ಎಡಿ-02 ಟಿ-2997 ನೇದ್ದರಿಂದ ಹಣ ವಸೂಲಿ ಮಾಡಲು ನೀವು ರಸ್ತೆ ಮಧ್ಯೆ ನಿಂತು ಬ್ಯಾಟ್ರಿ ಹೊಡೆದು ನಿಲ್ಲಿಸಲು ಕೈ ಮಾಡಿದಾಗ ಸದರಿ ಲಾರಿ ಡ್ರೈವರನು ನಿಮಗೆ ಹಾಯಿಸಿದಾಗ ನಿಮ್ಮ ತಲೆಗೆ ಭಾರಿ ದು:ಶಾಪಕ ಆಗಿದೆ. ನಂತರ ನೀವು ಸದರಿ ಲಾರಿ ಡ್ರೈವರನು ಕೊಟ್ಟ ರೂ.1000/-ಗಳಲ್ಲಿ ಸಿಪಿಸಿ-621, ಸಿಪಿಸಿ-603 ಹಾಗೂ ಸಿಪಿಸಿ-636 ರವರ ಮುಖಾಂತರ ರೂ.900/-(ರೂ.100/- ದವಾಖಾನೆ ಖರ್ಚು ಬಿಟ್ಟು) ಗಳನ್ನು ಪಡೆದಿದ್ದೀರಿ. ಈ ಮೂಲಕ ನೀವು ಘೋರ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದೀರಿ.''

ಮೇಲ್ಕಂಡ ಆರೋಪದ ಬಗ್ಗೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆಪಾದನೆ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಿಜಾಪುರ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:20-12-1997ರ ತಮ್ಮ ಆದೇಶದಲ್ಲಿ ಅರ್ಜಿದಾರರುಗಳ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ನಾಲ್ಕು ವರ್ಷಗಳ ವರೆಗೆ ಮುಂದೂಡಿ, ಇದು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವುದೆಂಬ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಐಜಿಪಿ, ಉತ್ತರ ವಲಯ ಬೆಳಗಾಂ ಇವರು ಮೇಲೆ ಕ್ರಮ ಸಂಖ್ಯೆ;(2)ರಲ್ಲಿ ಓದಲಾದ ದಿನಾಂಕ:20-08-1998 ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರುಗಳು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಸಲ್ಲಿಸಿರುತ್ತಾರೆ. ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು, ಇತರ ಲಭ್ಯವಿರುವ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಆಪಾದಿತರೆಲ್ಲಾ ಯಾಕೆ ಒಟ್ಟಾಗಿ ಒಂದೇ ಕಡೇ ಕೂಡಿದರು. ಆಪಾದಿತ ಚಲವಾದಿಗೆ ಅಪಘಾತವಾದ ಬಗ್ಗೆ ಎಲ್ಲಾ ಆಪಾದಿತರಿಗೂ ಹೇಗೆ ತಿಳಿಯಿತು, ವೈದ್ಯರ ಬಳಿ ಅರ್ಜಿದಾರನನ್ನು ಹೇಗೆ ಕರೆದುಕೊಂಡು ಹೋದರೆಂಬ ಬಗ್ಗೆ ಮಾಹಿತಿ ಎಲ್ಲಿಯೂ ಹೇಳಿಲ್ಲ ಹಾಗೂ ಪೊಲೀಸ್ ಠಾಣೆಗೂ ಸಹ ಮಾಹಿತಿ ತಕ್ಷಣ ನೀಡಿಲ್ಲದಿರುವ ಅಂಶಗಳ ಆಧಾರದ ಮೇಲೆ ಶಿಸ್ತು ಪ್ರಾಧಿಕಾರಿಯ ಆದೇಶ ಸಮಂಜಸವಾಗಿದ್ದು, ಇದರಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 203 ಪೊಸಿಅ 2000 ಬೆಂಗಳೂರು, ದಿನಾಂಕ: 01ನೇ ಜೂನ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಗಳು 1965 ರಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅರ್ಜಿದಾರರುಗಳಾದ 1) ಶ್ರೀ ಎಸ್.ಎನ್.ಚಲವಾದಿ ಪಿಸಿ 1514, 2) ಶ್ರೀ ಎಸ್.ಕೆ.ಪಠಾಣ, ಪಿಸಿ 636, 3) ಶ್ರೀ ಎಂ.ಬಿ.ನದಾಫ್ ಪಿಸಿ 603 ಹಾಗೂ 4) ಶ್ರೀ ಕೆ.ಐ.ದೇಸಾಯಿ ಪಿಸಿ 621 ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 836

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## FOREST, ECOLOGY AND ENVIRONMENT SECRETARIAT

**Sub:** Diversion of 0.40 ha. of forest land in Sy.No.10 of Basapura Village Chennagiri Taluk for the purpose of establishing of Mini Hydel Power Project in favour of M/s Mrujaara power Plant.

**Read:**
1. Letter No. A5(4)GFL. CR.-23/03-04, Dated: 21.10.04 of Principal Chief Conservator of Forests, Bangalore.
2. State Government letter No. FEE 176 FLL 2004, dated: 2.12.2004.
3. Letter No.4-KR Bo44/2004-BAN dated: 24.01.2005 of Government of India, Ministry of Environment and Forests, Bangalore.
4. State Government letter No. FEE 176 FLL 2004, dated: 30.4.05.
5. Letter No.4-KR Bo44/2004-BAN dated: 06.05.2005 of Government of India, Ministry of Environment and Forests, Bangalore.

**Preamble:-**

The Principal Chief Conservator of Forests, Bangalore vide his letter dated 21.10.2004 read at (1) above has submitted the proposal to obtain the approval of Government of India under Section 2 of Forest (Conservation) Act,1980 for diversion of 0.40 ha. of forest land in Sy.No.10 of Basapura Village Chennagiri Taluk for the purpose of establishing of Mini Hydel Power Project in favour of M/s Mrujaara power Plant subject to certain conditions.

Accordingly the proposal was recommended to Government of India vide State Government letter dated 2.12.2004 read at(2) above.

The Government of India, Ministry of Environment and Forests, Bangalore vide their letter dated 24.1.2005 read at (3) above sought some details for further processing of the proposal.

The Principal Chief Conservator of Forests, Bangalore vide his letter dated 12.04.2005 furnished the information and the same has been sent to Government of India vide State Government letter dated: 30.04.2005 read at (4) above.

Finally, Government of India Ministry of Environment and Forests, Bangalore vide their letter dated 06/05/2005 read at(5) above has conveyed its approval (Stage-II) under Section 2 of Forest (Conservation) Act,1980 for diversion of 0.40 ha. of forest land in Sy.No.10 of Basapura Village Chennagiri Taluk for the purpose of establishing of Mini Hydel Power Project in favour of M/s Mrujaara power Plant. subject to certain conditions:

The proposal has been examined in detail and hence the order.

**Government Order No. FEE 176 FLL 2004, Bangalore, Dated: 14th June 2005.**

In the Circumstances explained in the preamble above, Government are pleased to accord sanction under Section 2 of Forest (Conservation) Act,1980 for diversion of of 0.40 ha. of forest land in Sy.No.10 of Basapura Village Chennagiri Taluk for the purpose of establishing of Mini Hydel Power Project in favour of M/s Mrujaara power Plant subject to the following conditions.

1. The legal Status of the forest land shall remain unchanged.
2. The total area utilized for the project shall not exceed 0.40 ha.
3. The lease is for a period of 30 years.
4. The lessee shall pay the lease rent as fixed by the Government from time to time.
5. The leased out area should be used for the purpose for which it is granted. In case the land is not used for the stipulated purpose with in one year or when it is no longer needed for the stipulated purpose the area should be forfeited to the Forest Department under Section 82 of Karnataka Forest Act 1963. The Conservator of Forests, Shimoga Circle is authorised to take necessary action in this regard. No Residential building shall be permitted in the proposed area.
6. The user agency should develop 5 Km (2.5 Km each side)"Strip Plantation" along the Canal at project cost.
7. The Karnataka Forest Act 1963 and Rules 1969 will be applicable for any violation.
8. The user agency has to pay the Net Present Value{NPV) of forest land diverted under this proposal in accordance with Government Notification dated: 17.1.04.
9. All the funds obtained as Net Present Value of diverted forest land should be deposited with Compensatory Afforestation Fund Management and Planning Authority(CAMPA).
10. Trees shall be felled only when it becomes necessary and under strict supervision of State Forest Department
11. The user agency shall pay the cost of extraction of trees as estimated by the Department if feling is necessary.
12. The user agency shall ensure that there should be no damage is caused to the available wildlife in the area.
13. The user agency shall abide by all the conditions imposed upon by Government of India, Government of Karnataka and Principal Chief Conservator of Forests, Bangalore
14. Any other condition to be stipulated by /Government of India/State Government /Principal Chief Conservator of Forests, Karnataka in the interest of conservation of forests.

By order and in the name of the Governor of Karnataka,

**S.R. VATSALA**

Under Secretary to Government,

Forest, Ecology and Environment Department.

P.R. 837

**ಆರ್ಥಿಕ ಸಚಿವಾಲಯ**

**ವಿಷಯ:–** ಕೆಲವೊಂದು ವರ್ಗದ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಗಳನ್ನು ನೀಡುವ ಕುರಿತು 2005ನೇ ಅಧಿಕಾರಿ ಸಮಿತಿಯು ಮಾಡಿರುವ ಶಿಫಾರಸ್ಸುಗಳನ್ನು ಜಾರಿಗೊಳಿಸುವುದು.

**ಪೀಠಿಕೆ:**

1998ರ ಅಧಿಕಾರಿ ವೇತನ ಸಮಿತಿಯ ಶಿಫಾರಸ್ಸುಗಳಿಗೆ ಅನುಗುಣವಾಗಿ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿ ಮತ್ತು ಭತ್ಯೆಗಳನ್ನು ದಿನಾಂಕ 1–4–1998 ರಿಂದ ಜಾರಿಗೆ ಬರುವಂತೆ ಪರಿಷ್ಕೃತಗೊಳಿಸಿದ ನಂತರ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ ಹಾಗೂ ಇತರ ಸೇವಾ ಸಂಘಗಳು ವೇತನ ಶ್ರೇಣಿಗಳನ್ನು ನಿಗದಿಗೊಳಿಸುವಲ್ಲಿ ಆಗಿರುವ ತಾರತಮ್ಯವನ್ನು ನಿವಾರಿಸಲು ಹಾಗೂ ವಿಶೇಷ ಭತ್ಯೆ ಹಾಗೂ ಇತರ ಭತ್ಯೆಗಳನ್ನು ಪರಿಷ್ಕರಣೆ ಮಾಡುವಂತೆ ಕೋರಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿದರು.

2000–01ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಅಂದಿನ ಮಾನ್ಯ ಮುಖ್ಯ ಮಂತ್ರಿಗಳು ಮಾಡಿದ ಘೋಷಣೆಯ ಹಿನ್ನೆಲೆಯಲ್ಲಿ, ಸರ್ಕಾರವು ದಿನಾಂಕ 4–1–2003 ಮತ್ತು 6–8–2004ರ ಆದೇಶಗಳನ್ನು ಓದಿಕೊಂಡಂತೆ, ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 13 ಎಸ್‌ಆರ್‌ಪಿ 2000 ದಿನಾಂಕ:17–6–2000ದಲ್ಲಿ, 1998ರ ಅಧಿಕಾರಿ ವೇತನ ಸಮಿತಿಯ ವರದಿಯ ಅನುಷ್ಠಾನದಿಂದ ಉದ್ಭವಿಸಲಾಗಿರುವ ವಿಷಯಗಳ ಕುರಿತು ರಾಜ್ಯ ಸರ್ಕಾರಿ ನೌಕರರ ದೂರುಗಳನ್ನು ಪರಿಶೀಲಿಸುವ ಸಲುವಾಗಿ ಅಧಿಕಾರಿ ಸಮಿತಿಯೊಂದನ್ನು ರಚಿಸಲಾಯಿತು. ಈ ವಿಷಯದಲ್ಲಿ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಅಧಿಕಾರಿ ಸಮಿತಿಯು ಕೆಲವೊಂದು ವರ್ಗದ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಯನ್ನು ಶಿಫಾರಸ್ಸು ಮಾಡಿದೆ. ಈ ಕುರಿತು ಮಾಡಲಾಗಿರುವ ಅಧಿಕಾರಿ ಸಮಿತಿಯ ಶಿಫಾರಸ್ಸುಗಳನ್ನು ಸರ್ಕಾರವು ಒಪ್ಪಿಕೊಂಡಿದೆ. ಅದರಂತೆ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2000, ಬೆಂಗಳೂರು, ದಿನಾಂಕ 9ನೇ ಜೂನ್ 2005**

ಕರ್ನಾಟಕ ನಾಗರಿಕ ಸೇವಾ (ಪರಿಷ್ಕೃತ ವೇತನ) ನಿಯಮಗಳು, 1999ರ ನಿಯಮ 4ರ ಉಪ–ನಿಯಮ (2)ರ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಅನುಬಂಧದ ಅಂಕಣ (3) ರಲ್ಲಿ ನಿರ್ದಿಷ್ಟಪಡಿಸಿದ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯನ್ನು ಅನುಬಂಧದ ಅಂಕಣ (5) ರಲ್ಲಿ ನಮೂದಿಸಿರುವ ಪರಿಷ್ಕೃತ ವೇತನ ಶ್ರೇಣಿಗೆ ಬದಲಾಗಿ ಅಂಕಣ (6) ರಲ್ಲಿ ನಮೂದಿಸಿರುವ ಸಂವಾದಿ ಪರಿಷ್ಕೃತ ವೇತನ ಶ್ರೇಣಿ ಆಗಿರತಕ್ಕದ್ದೆಂದು ಈ ಮೂಲಕ ಆದೇಶಿಸಿದೆ.

2. ಈ ಆದೇಶದ ಮೂಲಕ ಮಂಜೂರು ಮಾಡಲಾದ ಪರಿಷ್ಕೃತ ವೇತನ ಶ್ರೇಣಿಗಳು ಕೂಡಲೇ ಜಾರಿಗೆ ಬರುತ್ತವೆ.

3. ಈ ಅನುಬಂಧದಲ್ಲಿ ನಮೂದಿಸಿರುವ ಹುದ್ದೆಗಳನ್ನು ಧಾರಣ ಮಾಡಿದ ಅಧಿಕಾರಿಗಳ ವೇತನವನ್ನು ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 43 ರಲ್ಲಿ ಕಲ್ಪಿಸಿರುವ ಅವಕಾಶಗಳ ಅನುಸಾರ ನಿಗದಿಪಡಿಸತಕ್ಕದ್ದು.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಟಿ. ನಾಯ್ಕ್**

ಸರ್ಕಾರದ ಉಪಕಾರ್ಯದರ್ಶಿ, ಆರ್ಥಿಕ ಇಲಾಖೆ (ಸೇವೆಗಳು–2).

**FINANCE SECRETARIAT**

**Subject:-** Implementation of the recommendations of the Official Committee 2005 regarding upward revision of the scales of pay of certain categories of posts.

**Preamble:**

Consequent upon revision of scales of pay and allowances of State Government employees with effect from 1st April 1998 on the basis of the recommendations of the Official Pay Committee, 1998, Karnataka State Government Employees' Association and other Service Associations had requested for removal of what they considered as anomalies in the allocation of pay scales to certain categories of posts and for enhancement/revision of the rates of special allowance and various other allowances.

In pursuance of the announcement made by the then Hon'ble Chief Minister in his Budget Speech 2000-2001, Government constituted an Official Committee to examine the grievances of State Government employees relating to matters arising out of implementation of the report of the Official Pay Committee 1998 vide Government Order No. FD 13 SRP 2000 dated 17th June 2000 read with Government Order of even number dated 4th January 2003 and 6th August 2004. After detailed examination of all the aspects of the matter, the Official Committee has recommended an upward revision of the scales of pay of certain categories of posts. Government have accepted the recommendations of the Official Committee in this regard. Accordingly, the following orders are issued.

**Government Order No. FD 13 SRP 2000, Bangalore, Dated 9th June 2005.**

In exercise of the powers conferred by sub-rule (2) of Rule 4 of the Karnataka Civil Services (Revised Pay) Rules, 1999, Government of Karnataka hereby order that the scale of pay applicable to the post specified in Column No.3 of Annexure shall be the revised scale mentioned in the corresponding entry in Column No.6 therein in substitution of the revised scale mentioned in Column No.5 *ibid*.

2. Application of the revised scales of pay sanctioned by these orders will come into force with immediate effect.

3. The pay of the Officers holding the post mentioned in Annexure shall be fixed in the revised scales of pay in accordance with the provisions of Rule 43 of the Karnataka Civil Services Rules.

By Order and in the name of the Governor of Karnataka,

**N. T. NAIK**

Deputy Secretary to Government, Finance Department (Services-2)

**ANNEXURE TO GOVERNMENT ORDER NO. FD 13 SRP 2000 DATED 9TH JUNE 2005.**

| Sl. No. | Department | Post | 1994 Scale of pay (Rs.) | 1999 Present scale of pay (Rs.) | 1999 Revised scale of pay (Rs.) |
|---|---|---|---|---|---|
| 1 | 2 | 3 | 4 | 5 | 6 |
| 1 | Administrative Training Institute | Chief Librarian | 1900 - 3700 | 5575 - 10620 | 6000 - 11200 |
| 2 | Agricultural Marketing | Senior Marketing Supervisor | 1520 - 2900 | 4575 - 8400 | 5200 – 9580 |
| 3 | Collegiate Education | Library Assistant | 1040 - 1900 | 3000 - 5450 | 3300 - 6300 |
| 4 | Economics and Statistics | 1.Deputy Director | 2375 – 4450 | 7400 – 13120 | 9580 – 14200 |
| | | 2.Assistant Statistical Officer | 1520 - 2900 | 4575 - 8400 | 5200 – 9580 |
| 5 | Fire and Emergency Services | 1. Sub-Officer (Station Officer) | 1280 – 2375 | 3850 – 7050 | 4150 – 7800 |
| | | 2. Fitter Class-I | 1130 - 2100 | 3300 - 6300 | 3850 – 7050 |
| 6 | Health and Family Welfare Services | 1. Deputy Dist. Health Education Officer | 1520 – 2900 | 4575 – 8400 | 5575 – 10620 |
| | | 2. District Health Education Officer | 1900 – 3700 | 5575 – 10620 | 6300 – 11840 |
| | | 3. Health Education Officer/Social Science Instructor* | 2150 – 4200 | 6300 – 11840 | 7400 – 13120 |
| | | 4. Lecturer in Health Education** (since abolished) | 2375 – 4450 | 7400 – 13120 | 8000 – 13440 (As personal to the existing incumbents only) |
| 7 | Mines and Geology | 1. Senior Geologist 2. Senior Geophysicist 3. Senior Chemist | 2150 – 4200 | 6300 - 11840 | 7400 – 13120 |
| 8 | Ports and Inland Water Transport | Director | 4200 - 6000 | 11520 - 15840 | 12800 - 16720 |
| 9 | Public Instruction | Inspector of Sanskrit Schools | 1900 - 3700 | 5575 - 10620 | 6000 – 11200 |
| 10 | Sainik Welfare and Resettlement | 1. Director | 3300 – 5300 | 9580 – 14200 | 11520 – 15840 |
| | | 2. Joint Director | 2600 - 4575 | 8000 - 13440 | 9580-14200 |

*Included in the cadre of Divisional Health Education Officer.

**Included in the cadre of Senior Health Education Officer.

**Note:- After the existing incumbents in the cadre of Senior Health Education Officer are promoted to the next higher cadre or on their retirement, whichever is earlier, both the cadres of Divisional Health Education Officer and Senior Health Education Officer shall be amalgamated.

**N. T. Naik**

P.R. 838 Deputy Secretary to Government, Finance Department (Services-2)

**ಕಾನೂನು ಸಚಿವಾಲಯ**

**ವಿಷಯ:** ಧಾರವಾಡ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಶ್ರೀ ಬಿ.ಜಿ. ಪಾಟೀಲ್, ವಕೀಲರು, ಧಾರವಾಡ ಇವರ ಅರ್ಜಿ ದಿನಾಂಕ: 9.12.2004.

2. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಇವರ ಪತ್ರ ದಿನಾಂಕ: 07.02.2005.

**ಪ್ರಸ್ತಾವನೆ:**

ಶ್ರೀ ಬಿ.ಜಿ. ಪಾಟೀಲ್, ವಕೀಲರು, ಧಾರವಾಡ ಇವರು ಮೇಲೆ (1)ರಲ್ಲಿ ಓದಲಾದ ಪತ್ರ ಬರೆಯುತ್ತಾ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ವ್ಯಾಪ್ತಿಗೆ ಹುಬ್ಬಳ್ಳಿ ತಾಲ್ಲೂಕು ಹಾಗೂ ಧಾರವಾಡ ತಾಲ್ಲೂಕು ಇವುಗಳ ಕೆಲ ಭಾಗಗಳು ಬರುವ ಕಾರಣ ಧಾರವಾಡ ಕಂದಾಯ ತಾಲ್ಲೂಕಿಗೆ ಪ್ರತ್ಯೇಕವಾದ ನೋಟರಿ ನೇಮಕಾತಿ ಮಾಡಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಇವರು ಮೇಲೆ (2)ರಲ್ಲಿ ಓದಲಾದ ಪತ್ರ ಬರೆಯುತ್ತಾ ಹುಬ್ಬಳ್ಳಿ ಮತ್ತು ಧಾರವಾಡ ಇವುಗಳನ್ನು ಬೇರೆ ಬೇರೆ ಕಂದಾಯ ತಾಲ್ಲೂಕುಗಳನ್ನಾಗಿ ಪರಿಗಣಿಸಿರುವುದಾಗಿ ತಿಳಿಸಿರುತ್ತಾರೆ.

ಈ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 126 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 8/15ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವುದರ ಹಿನ್ನೆಲೆಯಲ್ಲಿ ಧಾರವಾಡ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 839

**ಸಿ.ಎ. ಬಾಬು ರವೀಂದ್ರನಾಥ್ ಪಟೇಲ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ, ಆಡಳಿತ-2

**ಕಾರ್ಮಿಕ ಸಚಿವಾಲಯ**

**ವಿಷಯ:** ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿ ವರ್ಗಕ್ಕೆ ಶೇ.70 ರಿಂದ ಶೇ.75ಕ್ಕೆ ಅನುದಾನ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಾಇ 56 ಇಟಿಐ 99 ದಿ 13.8.2001.
2. ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಅವರ ಪತ್ರ ಸಂಖ್ಯೆ:ಉತಇ/ತ/ಸಂ-1/ವಿವ-80/2003-2004 ದಿ:29.9.2004.

**ಪ್ರಸ್ತಾವನೆ:**

ಮೇಲೆ ಓದಲಾದ (1) ಸರ್ಕಾರದ ಆದೇಶ ಸಂಖ್ಯೆ: ದಿ: 13.8.2001ರಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ನೌಕರರಿಗೆ ಶೇ.70ರಂತೆ ಪರಿಷ್ಕರಿಸಿ ಸಹಾಯಾನುದಾನ ಬಿಡುಗಡೆ ಮಾಡಲಾಗಿತ್ತು.

ಮೇಲೆ ಓದಲಾದ (2) ದಿ: 29.9.2004ರ ಪತ್ರದಲ್ಲಿ ನಿರ್ದೇಶಕರು, ಉದ್ಯೋಗ ತರಬೇತಿ ಇಲಾಖೆ, ಬೆಂಗಳೂರು, ಇವರು ಹಾಗೂ ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ನೌಕರರ ಸಂಘಗಳು, ಶಾಸಕರು ಹಾಗೂ ಗಣ್ಯ ವ್ಯಕ್ತಿಗಳಿಂದ ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿಗಳಿಗೆ ಶೇ.70 ರಿಂದ ಶೇ.100 ಸಹಾಯಾನುದಾನ ಬಿಡುಗಡೆ ಮಾಡಲು ಮನವಿಗಳು ಬಂದಿರುತ್ತವೆ.

ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಅವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 10 ಇಟಿಎ 2005, ಬೆಂಗಳೂರು, ದಿನಾಂಕ: 18ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸನ್ನಿವೇಶದ ಹಿನ್ನೆಲೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ನೌಕರರಿಗೆ ಸಹಾಯಾನುದಾನವನ್ನು ಶೇ. 70 ರಿಂದ ಶೇ. 75ಕ್ಕೆ ಹೆಚ್ಚಿಸಲಾಗಿದೆ. ಮತ್ತು ರೂ. 329.66 ಲಕ್ಷಗಳನ್ನು (ಮೂರುನೂರ ಇಪ್ಪತ್ತೊಂಬತ್ತು ಲಕ್ಷದ ಅರವತ್ತಾರು ಸಾವಿರ ರೂಪಾಯಿಗಳು) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

ಬಿಡುಗಡೆ ಮಾಡಲಾದ ಮೊಬಲಗನ್ನು ಮೊದಲು ಸಾದಿಲ್ವಾರು ನಿಧಿಯಿಂದ ಲೆಕ್ಕ ಶೀರ್ಷಿಕೆ "800-00-240-0-00- ಕಾರ್ಮಿಕ ಮತ್ತು ಉದ್ಯೋಗ" ದಡಿಯಲ್ಲಿ ಬಿಡುಗಡೆ ಮಾಡಿ ನಂತರ ಲೆಕ್ಕ ಶೀರ್ಷಿಕೆ "2230-03-101-0--101(ಪಿ)" ಭರಿಸಿ ಪೂರಕ ಅಂದಾಜುಗಳಲ್ಲಿ ಸಹಾಯಾನುದಾನ ನಿಧಿಗೆ ಮರು ತುಂಬಲಾಗುವುದು. ಆರ್ಥಿಕ ಇಲಾಖೆಯು ಈ ಮೊಬಲಗನ್ನು ಸಾದಿಲ್ವಾರು ನಿಧಿಯಿಂದ ಬಿಡುಗಡೆ ಮಾಡಿ ಪ್ರತ್ಯೇಕ ಆದೇಶ ಹೊರಡಿಸುವುದು. ಆರ್ಥಿಕ ಇಲಾಖೆಯ ಆದೇಶದ ಮೇಲೆಯೇ ಮೊಬಲಗು ಬಿಡುಗಡೆ ಮಾಡಲಾಗುವುದೇ ಹೊರತು ಈ ಆದೇಶದ ಮೇಲೆ ಮೊಬಲಗು ಪಡೆಯುವಂತಿಲ್ಲ. ಹಣ ಪಡೆಯುವ ಅಧಿಕಾರಿಯು ಸಾದಿಲ್ವಾರು ನಿಧಿಯಿಂದ ಹಣವನ್ನು ಪಡೆಯಲು ಬಿಲ್ಲನ್ನು ಖಜಾನೆಗೆ ಸಲ್ಲಿಸುವಾಗ ಇಲಾಖೆಯ ಆದೇಶಕ್ಕೆ ಆರ್ಥಿಕ ಇಲಾಖೆಯು ಹೊರಡಿಸುವ ಪ್ರತ್ಯೇಕ ಆದೇಶವನ್ನು ಲಗತ್ತಿಸಿದ ನಂತರವೇ ಖಜಾನೆಯಿಂದ ಹಣವನ್ನು ಬಿಡುಗಡೆ ಮಾಡಲು ಕ್ರಮಕೈಗೊಳ್ಳಲಾಗುವುದು.

1. ಅನುದಾನ ಸಂಹಿತೆಯಲ್ಲಿ ವಿಧಿಸಿರುವ ಎಲ್ಲಾ ನಿಬಂಧನೆಗಳನ್ನು ಪರಿಪಾಲಿಸಿರುವುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.
2. ಲೆಕ್ಕ ಪರಿಶೋಧನೆಯ ನಂತರವೇ ಮತ್ತು ಉಳಿದ ಶೇ.25 ರಷ್ಟನ್ನು ಸಂಸ್ಥೆಗಳು ಭರಿಸಿದ ನಂತರ ಈ ಹಣವನ್ನು ಬಿಡುಗಡೆ ಮಾಡತಕ್ಕದ್ದು.
3. ಕಾರ್ಮಿಕ ಇಲಾಖೆಯು ಅನಂತರ ಅಥವಾ ಮುಂದಿನ ವರ್ಷಗಳಲ್ಲಿ ಈ ಬಗ್ಗೆ ಹೆಚ್ಚಿನ ಅನುದಾನಕ್ಕೆ ಬೇಡಿಕೆ ಸಲ್ಲಿಸಕೂಡದು.
4. ಇಲಾಖೆಯು ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಸಂಬಂಧಿಸಿದ ಎಕ್ಸಿಟ್ ಪಾಲಿಸಿಯನ್ನು ಆರ್ಥಿಕ ಇಲಾಖೆಯ ಪ್ರತಿನಿಧಿಯನ್ನೊಳಗೊಂಡ ಸಮಿತಿಯ ಮೂಲಕ ಸಲ್ಲಿಸತಕ್ಕದ್ದು.
5. ಆರ್ಥಿಕ ಇಲಾಖೆಯ ಅನುಮೋದನೆ ಇಲ್ಲದೇ ಯಾವುದೇ ವೃತ್ತಿ ಹುದ್ದೆಗಳನ್ನು ಸಂಸ್ಥೆಗಳು ಅನುದಾನಕ್ಕೆ ಒಳಪಡಿಸುವಂತಿಲ್ಲ.

ಈಗಾಗಲೇ ದಿ:9.5.2005 ಸಂಖ್ಯೆ:ಕಾಇ 10 ಇಟಿಎ 2005ರಂದು ಹೊರಡಿಸಿದ ಆದೇಶವನ್ನು ಭಾಗಶಃ ಮಾರ್ಪಡಿಸಿ ಈ ಆದೇಶ ಹೊರಡಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 23 ವೆಚ್ಚ-9 2004 ದಿ:26.4.2005ರಲ್ಲಿ ಸಹಮತಿ ನೀಡಿದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 840

**ಎಂ.ಪಿ. ನಾಗರಾಜ**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

**ವಿಷಯ:** 2005-06ನೇ ಸಾಲಿನ ಆಯವ್ಯಯ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ:ಉತಇ:ತ:ಯೋ-1:ಸಿಆರ್-34/04-05, ದಿ:15.4.2005.

**ಪ್ರಸ್ತಾವನೆ:**

2005-06ನೇ ಸಾಲಿನ ಆಯವ್ಯಯದಲ್ಲಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ರಾಜ್ಯವಲಯದಡಿಯಲ್ಲಿ (ಯೋಜನೆ ಅಡಿಯಲ್ಲಿ) ಯಾವುದೇ ಅನುದಾನ ನೀಡಿರುವುದಿಲ್ಲ. ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ರವರು ದಿ:15.4.2005 ರಂದು ಸರ್ಕಾರಕ್ಕೆ ಬರೆದಿರುವ ಪತ್ರದಲ್ಲಿ 2005-06ನೇ ಸಾಲಿಗೆ ಕೈಗಾರಿಕಾ ತರಬೇತಿ ಸಂಸ್ಥೆ (ಯೋಜನೆ) ಕಾರ್ಯಕ್ರಮ ಅಡಿಯಲ್ಲಿ ಮೊದಲನೆ 4 ತಿಂಗಳಿಗೆ ಬೇಕಾಗುವ ಆಯವ್ಯಯ ಬಿಡುಗಡೆ ಪ್ರಸ್ತಾವನೆ ಸಲ್ಲಿಸಿ ಸರ್ಕಾರದ ಮಂಜೂರಾತಿ ಕೋರಿರುತ್ತಾರೆ. ಇದರ ಬಗ್ಗೆ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 126 ಇಟಿಎ 2005, ಬೆಂಗಳೂರು, ದಿನಾಂಕ: 10ನೇ ಜೂನ್ 2005**

2005-06ನೇ ಸಾಲಿಗೆ ಕೈಗಾರಿಕಾ ತರಬೇತಿ ಸಂಸ್ಥೆ (ಯೋಜನೆ) ಕಾರ್ಯಕ್ರಮ ಅಡಿಯಲ್ಲಿ ಮೊದಲ 4 ತಿಂಗಳಿಗೆ ಬೇಕಾಗುವ ಆಯವ್ಯಯವಾದ ರೂ.638 ಲಕ್ಷ (ಆರು ನೂರ ಮೂವತ್ತೆಂಟು ಲಕ್ಷಗಳು ಮಾತ್ರ) ಸಾದಿಲ್ವಾರು ನಿಧಿಯಿಂದ ಈ ಕೆಳಕಂಡ ಷರತ್ತಿಗೊಳಪಟ್ಟು ಈ ಕೆಳಕಂಡಂತೆ ಬಿಡುಗಡೆ ಮಾಡಲಾಗಿದೆ.

| | | |
|---|---|---|
| 1. | ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಂಬಳ | ರೂ. 127.64 ಲಕ್ಷ |
| 2. | ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಂಬಳ | ರೂ. 300.92 ಲಕ್ಷ |
| 3. | ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ವೇತನೇತರ ಖರ್ಚು | ರೂ. 209.44 ಲಕ್ಷ |
| | **ಒಟ್ಟು** | **ರೂ. 638.00 ಲಕ್ಷ** |

**ಷರತ್ತುಗಳು:**

1) ಬಿಡುಗಡೆ ಮಾಡಲಾದ ಮೊಬಲಗನ್ನು ಮೊದಲು ಸಾದಿಲ್ವಾರು ನಿಧಿಯಿಂದ ಲೆಕ್ಕ ಶೀರ್ಷಿಕೆ 800-00-240-0-00 ಕಾರ್ಮಿಕ ಮತ್ತು ಉದ್ಯೋಗದಡಿಯಲ್ಲಿ ಬಿಡುಗಡೆ ಮಾಡಿ ನಂತರ ಲೆಕ್ಕಶೀರ್ಷಿಕೆ 2230-03-101-0-01 (ಯೋಜನೆ) ಭರಿಸಿ ಪೂರಕ ಅಂದಾಜುಗಳಲ್ಲಿ ಸಹಾಯಾನುದಾನ ನಿಧಿಗೆ ಮರುತುಂಬಲಾಗುವುದು. ಆರ್ಥಿಕ ಇಲಾಖೆಯು ಈ ಮೊಬಲಗನ್ನು ಸಾದಿಲ್ವಾರು ನಿಧಿಯಿಂದ ಬಿಡುಗಡೆ ಮಾಡಿ ಪ್ರತ್ಯೇಕ ಆದೇಶ ಹೊರಡಿಸುವುದು. ಆರ್ಥಿಕ ಇಲಾಖೆಯ ಆದೇಶದ ಮೇಲೆಯೇ ಮೊಬಲಗು ಬಿಡುಗಡೆ ಮಾಡಲಾಗುವುದೇ ಹೊರತು ಈ ಆದೇಶದ ಮೇಲೆ ಮೊಬಲಗು ಪಡೆಯುವಂತಿಲ್ಲ. ಹಣ ಪಡೆಯುವ ಅಧಿಕಾರಿಯು ಸಾದಿಲ್ವಾರು ನಿಧಿಯಿಂದ ಹಣವನ್ನು ಪಡೆಯಲು ಬಿಲ್ಲನ್ನು ಖಜಾನೆಗೆ ಸಲ್ಲಿಸುವಾಗ ಇಲಾಖೆಯ ಆದೇಶಕ್ಕೆ ಆರ್ಥಿಕ ಇಲಾಖೆಯು ಹೊರಡಿಸುವ ಪ್ರತ್ಯೇಕ ಆದೇಶವನ್ನು ಲಗತ್ತಿಸಿದ ನಂತರವೇ ಖಜಾನೆಯಿಂದ ಹಣವನ್ನು ಬಿಡುಗಡೆ ಮಾಡಲು ಕ್ರಮಕೈಗೊಳ್ಳಲಾಗುವುದು.
2) ಅನುದಾನ ಸಂಹಿತೆಯಲ್ಲಿ ವಿಧಿಸಿರುವ ಎಲ್ಲಾ ನಿಬಂಧನೆಗಳನ್ನು ಪರಿಪಾಲಿಸಿರುವುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.
3) ಲೆಕ್ಕಪರಿಶೋಧನೆಯ ನಂತರವೇ ಮತ್ತು ಉಳಿದ ಶೇ.25 ರಷ್ಟನ್ನು ಸಂಸ್ಥೆಗಳು ಭರಿಸಿದ ನಂತರ ಈ ಹಣವನ್ನು ಬಿಡುಗಡೆ ಮಾಡತಕ್ಕದ್ದು.
4) ಸರ್ಕಾರದ ಅನುಮೋದನೆ ಇಲ್ಲದೇ ಯಾವುದೇ ವೃತ್ತಿ ಹುದ್ದೆಗಳನ್ನು ಸಂಸ್ಥೆಗಳು ಅನುದಾನಕ್ಕೆ ಒಳಪಡಿಸುವಂತಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 276 ವೆಚ್ಚ-9/2005, ದಿನಾಂಕ:9.6.2005 ರಲ್ಲಿ ಸಹಮತಿ ನೀಡಿದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 841

**ಜಿ.ಎನ್. ಲಕ್ಷ್ಮೀಪತಿ**

ಸರ್ಕಾರದ ಉಪಕಾರ್ಯದರ್ಶಿ, ಕಾರ್ಮಿಕ ಇಲಾಖೆ.

**ವಿಷಯ:** ಉದ್ಯೋಗ ಮತ್ತು ತರಬೇತಿ ಇಲಾಖೆಯ, ಉದ್ಯೋಗ ವಿಭಾಗದ ಅಧಿಕಾರಿ/ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 15 ಸೇಇವಿ 2003 ದಿ: 1.9.2003.
2. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 15 ಸೇಇವಿ 2003 ದಿ: 17.5.2004.
3. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 14 ಸೇಇವಿ 2004 ಭಾಗ ದಿ: 27.5.2005.
4. ಸಂಖ್ಯೆ:ಉತನಿ/ಉದ್ಯೋಗ/ಆಡಳಿತ-1ಎ/ವಿವ-27/2004-05 ದಿ:9.5.2005ರಂದು ಕೊನೆಗೊಳ್ಳುವ ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇವರ ಪತ್ರ ವ್ಯವಹಾರ.
5. ಸರ್ಕಾರದ ಆದೇಶ ಸಂಖ್ಯೆ:ಕಾಇ 7 ಇಟಿಎಂ 2004 ದಿನಾಂಕ: 25.5.2005.

**ಪ್ರಸ್ತಾವನೆ:**

ರಾಜ್ಯ ಸರ್ಕಾರದ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ಪ್ರಕಟಿಸಲಾಗಿದ್ದು ನಂತರ (2)ರ ಆದೇಶಗಳಲ್ಲಿ ಸದರಿ ಆದೇಶಕ್ಕೆ ಕೆಲವು ಮಾರ್ಪಾಟುಗಳನ್ನು ತರಲಾಗಿದೆ. ಆ ಹಿನ್ನೆಲೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ವಿವಿಧ ವೃಂದಗಳ ಅಧಿಕಾರಿ/ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯ ಸೌಲಭ್ಯ ನೀಡುವ ಕುರಿತಂತೆ ಉದ್ಯೋಗ ಮತ್ತು ತರಬೇತಿ ಇಲಾಖೆಯ ನಿರ್ದೇಶಕರು ಮೇಲೆ ಓದಲಾದ (4) ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಆ ಪ್ರಕಾರ ಇಲಾಖೆಯ ವಿವಿಧ ವೃಂದಗಳಿಗೆ ಸೇರಿದ ಒಟ್ಟು 30 ಅಧಿಕಾರಿ/ನೌಕರರು ಈ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆಂದು ತಿಳಿಸುತ್ತಾ ಈ ಪ್ರಕರಣವನ್ನು ಸದರಿ ಯೋಜನೆಯಡಿ ಪರಿಶೀಲಿಸಲು ಶಿಫಾರಸ್ಸು ಮಾಡಿರುತ್ತಾರೆ. ಮೇಲೆ ಓದಲಾದ (5)ರ ಆದೇಶದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದಲ್ಲಿನ ಹೆಚ್ಚುವರಿ ಹುದ್ದೆಗಳನ್ನು ಗುರುತಿಸಿ ಆದೇಶ ಹೊರಡಿಸಿದೆ.

ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 28 ಇಟಿಎಕ್ಸ್ 2004(ಭಾ), ಬೆಂಗಳೂರು, ದಿನಾಂಕ: 14ನೇ ಜೂನ್ 2005**

ಆ ಹಿನ್ನೆಲೆಯಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವ ಉದ್ಯೋಗ ಮತ್ತು ತರಬೇತಿ ಇಲಾಖೆಯ ವಿವಿಧ ವೃಂದಗಳ ಒಟ್ಟು 29 ಅಧಿಕಾರಿ/ನೌಕರರಿಗೆ ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ: 1.9.2003, 17.5.2004 ಮತ್ತು 27.5.2005ರಲ್ಲಿ ನಮೂದಿಸಿರುವ

ಷರತ್ತುಗಳನ್ನು ಪೂರೈಸುವುದಕ್ಕೆ ಬದ್ಧವಾಗಿ ತಕ್ಷಣ ಜಾರಿಗೆ ಬರುವಂತೆ ವಿಶೇಷ ಸ್ವಯಂ ನಿವೃತ್ತಿ ಯೋಜನೆ ಅಡಿ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ ಹಾಗೂ ಆ ದಿನಾಂಕದಿಂದ ಆ ಹುದ್ದೆಗಳನ್ನು ರದ್ದುಗೊಳಿಸಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 365-ವೆಚ್ಚ-9/2005 ದಿ:3.6.2005ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ನಾಗರಾಜ**
ಪೀಠಾಧಿಕಾರಿ, ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

**ಅನುಬಂಧ**

**ವಿಶೇಷ ಸ್ವಯಂ ನಿವೃತ್ತಿ ಯೋಜನೆ. ಸರ್ಕಾರಿ ಆದೇಶ ಸಂಖ್ಯೆ ಕಾಇ 28 ಇಟಿಎಕ್ಸ್ 2004(ಭಾ) ದಿ: 14ನೇ ಜೂನ್ 2005**

| ಕ್ರ. ಸಂ. | ಹೆಸರು/ಪದನಾಮ | ಕ್ರ. ಸಂ. | ಹೆಸರು/ಪದನಾಮ |
|---|---|---|---|
| 1. | ಶ್ರೀ ಸಿ.ಎಸ್. ಬಗಲಿ, ಸಹಾಯಕ ನಿರ್ದೇಶಕರು | 2. | ಶ್ರೀ ಎ.ವಿ. ಬಸವರಾಜ್, ಸಹಾಯಕ ನಿರ್ದೇಶಕರು |
| 3. | ಶ್ರೀ ಆರ್.ಆರ್. ಮಂಜುನಾಥ್, ಸಹಾಯಕ ನಿರ್ದೇಶಕರು | 4. | ಶ್ರೀ ಆರ್. ಕೃಷ್ಣಗುರು, ಸಹಾಯಕ ನಿರ್ದೇಶಕರು |
| 5. | ಶ್ರೀ ಜಿ.ಹೆಚ್. ಅನಂತ ರಾಮು, ಸಹಾಯಕ ನಿರ್ದೇಶಕರು | 6. | ಶ್ರೀ ಡಿ.ಎನ್. ಚಂಚಲ, ಸಹಾಯಕ ನಿರ್ದೇಶಕರು |
| 7. | ಶ್ರೀ ಆರ್.ಎಂ. ಸಾರಾಪುರೆ, ಉದ್ಯೋಗಾಧಿಕಾರಿ | 8. | ಶ್ರೀಮತಿ ವಿ. ಮೀರಾ, ಉದ್ಯೋಗಾಧಿಕಾರಿ (ಸ್ವತಂತ್ರ ಪ್ರಭಾರ) |
| 9. | ಶ್ರೀ ಎ.ಎಂ. ರುದ್ರಪ್ಪ, ಉದ್ಯೋಗಾಧಿಕಾರಿ, (ಸ್ವತಂತ್ರ ಪ್ರಭಾರ) | 10. | ಶ್ರೀ ಹೆಚ್.ಆರ್. ಶ್ರೀನಿವಾಸಯ್ಯ, ಶೀಘ್ರಲಿಪಿಗಾರರು |
| 11. | ಶ್ರೀಮತಿ ಡಿ.ವಿ. ಶೇಷಮ್ಮ ಪ್ರಥಮ ದರ್ಜೆ ಸಹಾಯಕರು | 12. | ಶ್ರೀ ಸಂಪತ್ ಕುಮಾರ್, ದ್ವಿತೀಯ ದರ್ಜೆ ಸಹಾಯಕರು |
| 13. | ಶ್ರೀ ವಿ. ಶ್ರೀಧರ್, ದ್ವಿತೀಯ ದರ್ಜೆ ಸಹಾಯಕರು. | 14. | ಶ್ರೀ ಕೆ. ಪ್ರೇಮ, ದ್ವಿತೀಯ ದರ್ಜೆ ಸಹಾಯಕರು. |
| 15. | ಶ್ರೀ ಎಂ. ರಾಜಶೇಖರ ಶರ್ಮ, ದ್ವಿತೀಯ ದರ್ಜೆ ಸಹಾಯಕರು. | 16. | ಶ್ರೀ ವಿ. ಶ್ರೀನಿವಾಸ್, ದ್ವಿತೀಯ ದರ್ಜೆ ಸಹಾಯಕರು |
| 17. | ಶ್ರೀ ಗವಿರಾಯ ಸ್ವಾಮಿ, ದ್ವಿತೀಯ ದರ್ಜೆ ಸಹಾಯಕರು | 18. | ಶ್ರೀ ಜಿ.ಟಿ. ನಾಗರಾಜ, ದ್ವಿತೀಯ ದರ್ಜೆ ಸಹಾಯಕರು. |
| 19. | ಶ್ರೀ ಮೊಹಮದ್ ಸದ್ಗತ್ ಉಲ್ಲಾ, ದ್ವಿತೀಯ ದರ್ಜೆ ಸಹಾಯಕರು. | 20. | ಶ್ರೀ ವಿ.ಬಿ. ವೆಂಕಪ್ಪ, ದ್ವಿತೀಯ ದರ್ಜೆ ಸಹಾಯಕರು. |
| 21. | ಶ್ರೀಮತಿ ವೈ.ಎಂ. ರಾಜಮ್ಮ ದ್ವಿತೀಯ ದರ್ಜೆ ಸಹಾಯಕರು. | 22. | ಶ್ರೀಮತಿ ಎಜಾಜ್ ಬೇಗಂ, ಬೆರಳಚ್ಚುಗಾರರು. |
| 23. | ಶ್ರೀ ಡಿ.ಬಿ. ನಾಗಪ್ಪ, ಗ್ರೂಪ್ ಡಿ. | 24. | ಶ್ರೀ ಬಿ.ಕೆ. ರಂಗಸ್ವಾಮಿ, ಗ್ರೂಪ್ ಡಿ. |
| 25. | ಶ್ರೀ ಎಸ್.ಎಂ. ಹೊಸಮನಿ, ಗ್ರೂಪ್ ಡಿ. | 26. | ಶ್ರೀ ಎಂ. ರುದ್ರಯ್ಯ, ಗ್ರೂಪ್ ಡಿ. |
| 27. | ಶ್ರೀ ವಿ. ಬಸವರಾಜು, ಗ್ರೂಪ್ ಡಿ. | 28. | ಶ್ರೀ ಯು.ಬಿ. ಕೊರಡೆ, ಗ್ರೂಪ್ ಡಿ. |
| 29. | ಶ್ರೀ ಎ.ಡಿ. ಕಾಳೆ, ಗ್ರೂಪ್ ಡಿ. | | |

**ಎಂ.ಪಿ. ನಾಗರಾಜ**
ಪಿ.ಆರ್. 842 ಪೀಠಾಧಿಕಾರಿ, ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

**ಕಂದಾಯ ಸಚಿವಾಲಯ**

**ತಿದ್ದುಪಡಿ ಸಂಖ್ಯೆ: ಕಂಇ 33 ಮುನೊಸೇ 2005, ಬೆಂಗಳೂರು, ದಿನಾಂಕ: 10ನೇ ಜೂನ್ 2005**

ದಿನಾಂಕ: 19.5.2005ರ ಅಧಿಸೂಚನೆ ಸಂಖ್ಯೆ:ಕಂಇ 33 ಮುನೊಸೇ (2) 2005ರ ಕ್ರಮಸಂಖ್ಯೆ 1ರ ವರ್ಗಾವಣೆಯಲ್ಲಿ ಹೇಳಲಾಗಿರುವ "ಶ್ರೀ ಕೆ.ಆರ್. ರೇಣುಕಾ ಪ್ರಸಾದ್, ಹೆಚ್ಚುವರಿ ಉಪ ನೋಂದಣಾಧಿಕಾರಿ, ಜಯನಗರ, ಬೆಂಗಳೂರು (ಜಿಲ್ಲಾ ನೋಂದಣಾಧಿಕಾರಿಯವರ ಕಛೇರಿ, ದಾವಣಗೆರೆ ಇಲ್ಲಿನ ಕೇಂದ್ರಸ್ಥಾನಿಕ ಸಹಾಯಕರ ಹುದ್ದೆಯನ್ನು ಸ್ಥಳಾಂತರಿಸಿರುವ ಹುದ್ದೆಯಲ್ಲಿ)" ಎಂಬುದಕ್ಕೆ ಬದಲಾಗಿ "ಶ್ರೀ ಕೆ.ಆರ್. ರೇಣುಕಾ ಪ್ರಸಾದ್, ಕೇಂದ್ರ ಸ್ಥಾನ ಉಪ ನೋಂದಣಾಧಿಕಾರಿ, ಜಯನಗರ, ಬೆಂಗಳೂರು (ಜಿಲ್ಲಾ ನೋಂದಣಾಧಿಕಾರಿಯವರ ಕಛೇರಿ, ದಾವಣಗೆರೆ ಇಲ್ಲಿನ ಕೇಂದ್ರಸ್ಥಾನಿಕ ಸಹಾಯಕರ ಹುದ್ದೆಯನ್ನು ಸ್ಥಳಾಂತರಿಸಿರುವ ಹುದ್ದೆಯಲ್ಲಿ)" ಎಂಬುದಾಗಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 843 **ಎಂ.ಪಿ. ಮಂಜುನಾಥ್**
ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ವಿಷಯ:** ಪಶುಪಾಲನೆ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ 04 ಸಹಾಯಕ ನಿರ್ದೇಶಕರುಗಳ ಹುದ್ದೆಗಳನ್ನು ರದ್ದು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ 61 ಪಅಸೇ 2003(2), ದಿನಾಂಕ:27.12.2004.

2. ನಿರ್ದೇಶಕರು, ಪಶುಪಾಲನೆ ಮತ್ತು ಪಶು ವೈದ್ಯ ಸೇವಾ ಇಲಾಖೆರವರ ಪತ್ರ ಸಂಖ್ಯೆ:ನಿಪಸಂ/ಸಿಬ್ಬಂದಿ-1/ವಿವ-68(ಅ)/2004-05 ದಿನಾಂಕ: 4.1.2005.

**ಪ್ರಸ್ತಾವನೆ:**

ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪಶುಪಾಲನೆ ಇಲಾಖೆಯಲ್ಲಿ 01 ಅಪರ ನಿರ್ದೇಶಕರು ಹಾಗೂ 02 ಜಂಟಿನಿರ್ದೇಶಕರ ಹುದ್ದೆಗಳನ್ನು ಹೊಸದಾಗಿ ಸೃಜಿಸಲಾಗಿದ್ದು, 04 ಸಹಾಯಕ ನಿರ್ದೇಶಕರ ಹುದ್ದೆಗಳನ್ನು ರದ್ದುಪಡಿಸಬೇಕೆಂದು ಆದೇಶಿಸಲಾಗಿದೆ.

ಕ್ರಮಸಂಖ್ಯೆ (2)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಪಶುಪಾಲನೆ ಮತ್ತು ಪಶುವೈದ್ಯ ಸೇವಾ ಇಲಾಖೆರವರು ಇಲಾಖೆಯಲ್ಲಿ ಈ ಕೆಳಕಂಡ ಸಹಾಯಕ ನಿರ್ದೇಶಕರುಗಳ ಹುದ್ದೆಗಳನ್ನು ರದ್ದು ಮಾಡಲು ಸರ್ಕಾರವನ್ನು ಕೋರಿರುತ್ತಾರೆ.

| ಕ್ರ. ಸಂ. | ಹುದ್ದೆಯ ಪದನಾಮ ಮತ್ತು ಸ್ಥಳ | ಲೆಕ್ಕಶೀರ್ಷಿಕೆ | ರದ್ದುಪಡಿಸಬಹುದಾದ ಹುದ್ದೆಗಳ ಸಂಖ್ಯೆ | ಷರಾ |
|---|---|---|---|---|
| 1. | ಸಹಾಯಕ ನಿರ್ದೇಶಕರು, ವೀರ್ಯ ಸಂಕಲನಾ ಕೇಂದ್ರ, ಕೊಯ್ಲಾ, ದಕ್ಷಿಣ ಕನ್ನಡ ಜಿಲ್ಲೆ. | 2403-00-102-1-06 ಜಾನುವಾರು ಸಾಕಾಣೆ ಕ್ಷೇತ್ರಗಳು ಮತ್ತು ತರಬೇತಿ ಕೇಂದ್ರ (ಯೋಜನೇತರ) | ಎರಡು ಹುದ್ದೆಗಳು | ಖಾಲಿ ಇರುತ್ತದೆ. |
| 2. | ಸಹಾಯಕ ನಿರ್ದೇಶಕರು, ಪ್ರಾದೇಶಿಕ ಕೋಳಿ ಸಾಕಾಣೆ ಕೇಂದ್ರ, ಹಾವೇರಿ. | 2403-00-103-0-01 ಕೋಳಿ ಸಾಕಾಣಿಕಾ ಕ್ಷೇತ್ರಗಳು, ರಾಜ್ಯ ಕುಕ್ಕುಟ ಕ್ಷೇತ್ರ | ಒಂದು ಹುದ್ದೆ | ಖಾಲಿ ಇರುತ್ತದೆ |
| 3. | ಸಹಾಯಕ ನಿರ್ದೇಶಕರು, ಪ್ರಧಾನ ಗ್ರಾಮೀಣ ಯೋಜನೆ, ಹೆಸರಘಟ್ಟ, ಬೆಂಗಳೂರು. | 2403-00-800-0-22 ಪಶು ಮತ್ತು ಪ್ರಾಣಿ ವಿಜ್ಞಾನ ವಿಶ್ವವಿದ್ಯಾಲಯ ಸ್ಥಾಪನೆ | ಒಂದು ಹುದ್ದೆ | ಖಾಲಿ ಇಲ್ಲ |

ನಿರ್ದೇಶಕರು ಪ್ರಸ್ತಾಪಿಸಿದಂತೆ ಮೇಲ್ಕಂಡ 04 ಸಹಾಯಕ ನಿರ್ದೇಶಕರ ಹುದ್ದೆಗಳನ್ನು ರದ್ದು ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಪಸಂಮೀ:61:ಪಅಸೇ:2003, ಬೆಂಗಳೂರು, ದಿನಾಂಕ: 9ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಪಶುಪಾಲನೆ ಮತ್ತು ಪಶು ವೈದ್ಯ ಸೇವಾ ಇಲಾಖೆಯಲ್ಲಿ ಈ ಕೆಳಕಂಡ 04 ಸಹಾಯಕ ನಿರ್ದೇಶಕರುಗಳ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಮಾಡಿ ಆದೇಶಿಸಿದೆ.

| ಕ್ರ. ಸಂ. | ಹುದ್ದೆಯ ಪದನಾಮ ಮತ್ತು ಸ್ಥಳ | ಲೆಕ್ಕಶೀರ್ಷಿಕೆ | ರದ್ದುಪಡಿಸಬಹುದಾದ ಹುದ್ದೆಗಳ ಸಂಖ್ಯೆ |
|---|---|---|---|
| 1. | ಸಹಾಯಕ ನಿರ್ದೇಶಕರು, ವೀರ್ಯ ಸಂಕಲನಾ ಕೇಂದ್ರ, ಕೊಯ್ಲಾ, ದಕ್ಷಿಣ ಕನ್ನಡ ಜಿಲ್ಲೆ. | 2403-00-102-1-06 ಜಾನುವಾರು ಸಾಕಾಣೆ ಕ್ಷೇತ್ರಗಳು ಮತ್ತು ತರಬೇತಿ ಕೇಂದ್ರ (ಯೋಜನೇತರ) | ಎರಡು ಹುದ್ದೆಗಳು |
| 2. | ಸಹಾಯಕ ನಿರ್ದೇಶಕರು, ಪ್ರಾದೇಶಿಕ ಕೋಳಿ ಸಾಕಾಣೆ ಕೇಂದ್ರ, ಹಾವೇರಿ. | 2403-00-103-0-01 ಕೋಳಿ ಸಾಕಾಣಿಕಾ ಕ್ಷೇತ್ರಗಳು, ರಾಜ್ಯ ಕುಕ್ಕುಟ ಕ್ಷೇತ್ರ | ಒಂದು ಹುದ್ದೆ |
| 3. | ಸಹಾಯಕ ನಿರ್ದೇಶಕರು, ಪ್ರಧಾನ ಗ್ರಾಮೀಣ ಯೋಜನೆ, ಹೆಸರಘಟ್ಟ, ಬೆಂಗಳೂರು. | 2403-00-800-0-22 ಪಶು ಮತ್ತು ಪ್ರಾಣಿ ವಿಜ್ಞಾನ ವಿಶ್ವವಿದ್ಯಾಲಯ ಸ್ಥಾಪನೆ | ಒಂದು ಹುದ್ದೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 844

**ಪಿ. ಸಂಪತ್ ಕುಮಾರ್**

ಪೀಠಾಧಿಕಾರಿ-1, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ)

**URBAN DEVELOPMENT SECRETARIAT**

**CORRIGENDUM No. UDD 192 MNI 2004, Bangalore, Dated: 14th June 2005**

The existing Condition No.4 in the order portion of Government Order No.UDD 192 MNI 2004 dated: 8-6-2005, shall be read as follows:-

"4. Regarding debt servicing initially decision will be taken when the repayment becomes due and separate orders issued".

By Order and in the name of Governor of Karnataka

**V.R. ILKAL**

P.R. 846

Under Secretary to Government
Urban Development Department.

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ವಿಷಯ:** ಶ್ರೀ ಎಂ.ಬಿ. ಮಲ್ಲಿಕಾರ್ಜುನಪ್ಪ, ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ವಿರುದ್ಧ ಶಿಸ್ತು ಕ್ರಮ ಕುರಿತು - ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ಪತ್ರಸಂಖ್ಯೆ:ಸಿಎಫ್‌ಎಸ್:ಇಎಸ್‌ಟಿ(2)63: 98-99, ದಿನಾಂಕ:28.2.2003.
2. ಆಯುಕ್ತರ ತಿಳುವಳಿಕೆ ಪತ್ರಸಂಖ್ಯೆ:ಸಿಎಫ್‌ಎಸ್:ಇಎಸ್‌ಟಿ(2)63:98-99, ದಿನಾಂಕ:5.7.99.
3. ಶ್ರೀ ಎಂ.ಬಿ. ಮಲ್ಲಿಕಾರ್ಜುನಪ್ಪ, ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ಲಿಖಿತ ಹೇಳಿಕೆ ದಿನಾಂಕ: 3.8.99.
4. ಆಯುಕ್ತರ ಆದೇಶ ಸಂಖ್ಯೆ:ಸಿಎಫ್‌ಎಸ್.ಇಎಸ್‌ಟಿ(2)63.98-99, ದಿನಾಂಕ:28.2.2000.
5. ಶ್ರೀ ಮಲ್ಲಿಕಾರ್ಜುನಪ್ಪ ಇವರು ಸಲ್ಲಿಸಿರುವ ಲಿಖಿತ ಹೇಳಿಕೆ ದಿನಾಂಕ:30.9.2000.
6. ಸರ್ಕಾರದ ಎರಡನೇ ಕಾರಣ ಕೇಳುವ ನೋಟಿಸ್ ದಿನಾಂಕ 12.8.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆಯುಕ್ತರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ಪತ್ರದಲ್ಲಿ ಶ್ರೀ ಎಂ.ಬಿ. ಮಲ್ಲಿಕಾರ್ಜುನಪ್ಪ, ಅಂದಿನ ಆಡಳಿತ ವಿಭಾಗದ ಉಪನಿರ್ದೇಶಕರಾದ ಇವರು ಶ್ರೀ ಹೆಚ್.ಆರ್. ರುದ್ರೇಗೌಡ, ಆಹಾರ ನಿರೀಕ್ಷಕರು, ವಾಸ್ತವವಾಗಿ ದಿನಾಂಕ:22.5.95ರಿಂದ 27.11.95ರವರೆಗೆ ವೈದ್ಯಕೀಯ ರಜೆ ಮೇಲಿದ್ದ ಅವಧಿಯ ಬಗ್ಗೆ ವಿಷಯ ನಿರ್ವಾಹಕರು ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಲು ಕೋರಿದ್ದರ ಮೇಲೆ ಪರಿಶೀಲಿಸದೆ ಯಥಾವತ್ತಾಗಿ ಒಪ್ಪಿ, ಮೇಲಾಧಿಕಾರಿಗೆ ಅನುಮೋದನೆಗಾಗಿ ಸಲ್ಲಿಸಿರುವುದಕ್ಕೆ 2 ಗುರುತರ ಆರೋಪಗಳ ಪಟ್ಟಿಯನ್ನು ಸಿದ್ದಪಡಿಸಿ ಕಳುಹಿಸಿರುತ್ತಾರೆ.

ಈ ಆರೋಪಕ್ಕೆ ಮೇಲೆ (2)ರಲ್ಲಿ ಓದಲಾದ ತಿಳುವಳಿಕೆ ಪತ್ರದಲ್ಲಿ ಶ್ರೀ ಎಂ.ಬಿ. ಮಲ್ಲಿಕಾರ್ಜುನಪ್ಪ, ಅಂದಿನ ಆಡಳಿತ ವಿಭಾಗದ ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ಮೇಲೆ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11ರಡಿಯಲ್ಲಿ ದೋಷಾರೋಪಣಾ ಪಟ್ಟಿಯನ್ನು ಸಿದ್ದಪಡಿಸಿ ಜಾರಿ ಮಾಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಲಿಖಿತ ಹೇಳಿಕೆಯಲ್ಲಿ ಶ್ರೀ ಎಂ.ಬಿ. ಮಲ್ಲಿಕಾರ್ಜುನಪ್ಪ, ಅಂದಿನ ಆಡಳಿತ ವಿಭಾಗದ ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು ಇವರು ಅವರ ಮೇಲಿನ 2 ಆರೋಪಗಳನ್ನು ನಿರಾಕರಿಸಿರುತ್ತಾರೆ. ಈ ಲಿಖಿತ ಹೇಳಿಕೆಗಳನ್ನು ಆಯುಕ್ತರು ಪರಿಶೀಲಿಸಿ ಅದು ಸಮರ್ಪಕವಲ್ಲವೆಂದು ಪರಿಗಣಿಸಿದ ಕಾರಣ ಮೇಲೆ ಓದಲಾದ (4)ರ ದಿನಾಂಕ:28.2.2000ರ ಆದೇಶದಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಉಪನಿರ್ದೇಶಕರು (ಆಡಳಿತ), ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಮತ್ತು ಸಹಾಯಕ ನಿರ್ದೇಶಕರು (ಜಾವಿ) ಕೇಂದ್ರ ಕಛೇರಿ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಿಸಿ ಆದೇಶ ಹೊರಡಿಸಲಾಗಿತ್ತು. ಈ ಕೆಳಕಂಡ 2 ಆರೋಪಗಳು ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ವರದಿ ನೀಡಿರುತ್ತಾರೆ.

**ಆರೋಪ-1:**

ಶ್ರೀ ಹೆಚ್.ಆರ್. ರುದ್ರೇಗೌಡ, ಆಹಾರ ನಿರೀಕ್ಷಕರು, ತಾಲ್ಲೂಕು ಕಛೇರಿ, ಬೇಲೂರಿನಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ವಾಹನ ಅಪಘಾತದಿಂದ ದಿ:22.5.95 ರಿಂದ 27.11.95ರವರೆಗೆ ಅವರು ವೈದ್ಯಕೀಯ ರಜೆ ಮೇಲಿದ್ದು, ದಿನಾಂಕ:28.11.95 ರಂದು ಕರ್ತವ್ಯಕ್ಕೆ ಹಾಜರಾಗಲು ಅರ್ಹರಾಗಿರುತ್ತಾರೆ. ಆದರೆ ಅಂದಿನ ವಿಷಯ ನಿರ್ವಾಹಕರು ಈ ಬಗ್ಗೆ ತಪ್ಪಾಗಿ ಗ್ರಹಿಸಿ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ತಿಳಿದು ಮಂಡಿಸಿದ ಪ್ರಸ್ತಾವನೆಯನ್ನು ಅಂದಿನ ಉಪನಿರ್ದೇಶಕರಾದ ಶ್ರೀ ಎಂ.ಬಿ. ಮಲ್ಲಿಕಾರ್ಜುನಪ್ಪ ಅವರು ಪರಿಶೀಲಿಸದೆ ಹಾಗೆಯೇ ಮೇಲಾಧಿಕಾರಿಗಳಿಗೆ ಕಡತ ಸಲ್ಲಿಸಿ ಕರ್ತವ್ಯ ಲೋಪವೆಸಗಿರುತ್ತಾರೆಂಬುದು ರುಜುವಾತಾಗಿದೆ.

**ಆರೋಪ-2:**

ಆರೋಪಿತ ಅಧಿಕಾರಿಯು ನೌಕರರ ಪ್ರಸ್ತಾವನೆ ಏನಿದೆ ಮತ್ತು ವಿಷಯ ನಿರ್ವಾಹಕರು ಏನು ಸಲ್ಲಿಸಿದ್ದಾರೆಂಬುದನ್ನು ಪರಿಶೀಲಿಸುವ ಕನಿಷ್ಟ ಪ್ರಯತ್ನವನ್ನೂ ಮಾಡದೇ ಯಥಾವತ್ತಾಗಿ ಒಪ್ಪಿ ಮೇಲಾಧಿಕಾರಿಗಳಿಗೆ ಕಡತ ಸಲ್ಲಿಸಿ ಸರ್ಕಾರಕ್ಕೆ ತಪ್ಪು ಪ್ರಸ್ತಾವನೆ ಹೋಗಲು ಜವಾಬ್ದಾರರಾಗಿ ಕರ್ತವ್ಯ ನಿರ್ಲಕ್ಷ್ಯತೆ ಎಸಗಿರುವುದು ಸಾಬೀತಾಗಿರುತ್ತದೆ.

ಈ 2 ಆರೋಪಗಳು ವಿಚಾರಣಾ ವರದಿಯಲ್ಲಿ ಸಾಬೀತಾಗಿದೆಯೆಂಬ ಕಾರಣಗಳಿಂದ ಅವುಗಳನ್ನು ಒಪ್ಪಿ ಅವರ ಹೇಳಿಕೆಯನ್ನು ಪಡೆಯಲು ವರದಿಯ ಪ್ರತಿಯನ್ನು ಆರೋಪಿ ಅಧಿಕಾರಿಗಳಿಗೆ ಕಳುಹಿಸಲಾಗಿತ್ತು. ಆರೋಪಿತ ಅಧಿಕಾರಿಯು ಮೇಲೆ (5)ರಲ್ಲಿ ಓದಲಾದ ಲಿಖಿತ ಹೇಳಿಕೆ ಸಲ್ಲಿಸಿ 2 ಆರೋಪಗಳನ್ನೂ ನಿರಾಕರಿಸಿರುತ್ತಾರೆ.

ಮೇಲೆ (6)ರಲ್ಲಿ ಓದಲಾದ ಸರ್ಕಾರದ ಎರಡನೇ ಕಾರಣ ಕೇಳುವ ನೋಟಿಸ್‌ಗೆ 15 ದಿನಗಳೊಳಗಾಗಿ ಲಿಖಿತ ಹೇಳಿಕೆ ನೀಡಲು ಆಪಾದಿತ ಅಧಿಕಾರಿಯನ್ನು ಕೋರಲಾಗಿತ್ತು. ಆದರೆ ಅವರಿಂದ ಈ ಬಗ್ಗೆ ಯಾವುದೇ ಉತ್ತರ ಬಾರದೆ ಇದ್ದದ್ದರಿಂದ ವಿಚಾರಣಾ ವರದಿ, ಸಂಬಂಧಿಸಿದ ದಾಖಲೆಗಳು, ಆರೋಪಿತ ಅಧಿಕಾರಿಯು ನೀಡಿರುವ ಹೇಳಿಕೆ ಇತ್ಯಾದಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 79 ಆಇಸೇ 2003, ಬೆಂಗಳೂರು, ದಿನಾಂಕ: 10ನೇ ಜೂನ್ 2005**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (ivಕ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಬಿ. ಮಲ್ಲಿಕಾರ್ಜುನಪ್ಪ, ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರಿಗೆ ಸಂಚಿತ ಪರಿಣಾಮ ಬೀರದಂತೆ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 847

**ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದಲ್ಲಿರುವ ಸೌಂಡ್ ರೆಕಾರ್ಡಿಸ್ಟ್ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 88 ಸ್ತಿಮರ 98 ದಿನಾಂಕ: 26.6.98.
2. ಸರ್ಕಾರದ ಆದೇಶ ಸಂಖ್ಯೆ: ಸಂಕಇ 12 ರಾಪಸ 2002 ದಿನಾಂಕ: 29.8.2002.
3. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 4 ರಾಪಸಿ 2004 ದಿನಾಂಕ: 31.5.2004.
4. ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ: ಎಆರ್ಎಸ್:5ಇಎಸ್‌ಟಿ:2005 ದಿನಾಂಕ: 25.1.2005 ಮತ್ತು 31.3.2005.

ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯಕ್ಕೆ ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮುಂದುವರೆದ ಯೋಜನೆಯಡಿಯಲ್ಲಿ ಸೌಂಡ್ ರೆಕಾರ್ಡಿಸ್ಟ್, ಗ್ರೂಪ್-ಸಿ ವೇತನ ಶ್ರೇಣಿ ರೂ.4575-8400ರ ಹುದ್ದೆಯನ್ನು ಮಂಜೂರು ಮಾಡಲಾಗಿದೆ. ಸದರಿ ಹುದ್ದೆಯನ್ನು ಉಲ್ಲೇಖ(2) (3)ರ ಸರ್ಕಾರದ ಆದೇಶಗಳಲ್ಲಿ ಕಾಲಕಾಲಕ್ಕೆ ಮುಂದುವರೆಸಲಾಗಿದೆ. ಈ ಅವಧಿಯು 31.3.2005ಕ್ಕೆ ಮುಕ್ತಾಯಗೊಂಡಿರುವುದರಿಂದ ಆ ಹುದ್ದೆಯನ್ನು ಮುಂದುವರೆಸುವಂತೆ ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶಕರು ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿ ಪ್ರಸ್ತುತ ಹುದ್ದೆಯು 2005-06ನೇ ಸಾಲಿನ ಆಯವ್ಯಯದ ಅಪೆಂಡಿಕ್ಸ್ - ಬಿ ಯಲ್ಲಿ ಮುಂದುವರಿದಿದೆ ಎಂದು ತಿಳಿಸಿ, ಪ್ರಸ್ತುತ ಹುದ್ದೆಯನ್ನು ದಿನಾಂಕ 1.4.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಬೇಕೆಂದು ಕೋರಿರುತ್ತಾರೆ.

ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 11 ರಾಪಸಿ 2005, ಬೆಂಗಳೂರು, ದಿನಾಂಕ: 6ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದಲ್ಲಿರುವ ರೂ.4575-8400 ವೇತನ ಶ್ರೇಣಿಯ ಒಂದು ಸೌಂಡ್ ರೆಕಾರ್ಡಿಸ್ಟ್ ಗ್ರೂಪ್-ಸಿ ಹುದ್ದೆಯನ್ನು ದಿನಾಂಕ: 1.4.2005 ರಿಂದ 31.3.2006ರ ವರೆಗೆ ಮುಂದುವರೆಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶೀಇ 330 ಐಎಫ್ (ಬಿಎ) 2005 ದಿನಾಂಕ: 19.5.2005ರಲ್ಲಿನ ಸಹಮತಿ ಮೇರೆಗೆ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.7.1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 848 **ಎಸ್. ವಿಶಾಲಾಕ್ಷಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ:** ಮೆಸರ್ಸ್ ಪ್ರಸನ್ನ ಪವರ್ ಲಿಮಿಟೆಡ್ ಕಂಪೆನಿಗೆ 6 ಮೆಗಾ ವ್ಯಾಟ್ ಸಾಮರ್ಥ್ಯದ ಅಣಿಯೂರು ಕಿರುಜಲ ವಿದ್ಯುತ್ ಯೋಜನಾನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 42 ಎನ್‌ಸಿಇ 1998 ದಿನಾಂಕ: 11.11.1998.
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 105 ಎನ್‌ಸಿಇ 2002 ದಿನಾಂಕ: 28.5.2002.
3. ಸರ್ಕಾರಿ ಆದೇಶ ಸಂಖ್ಯೆ: ಇಂಇ 266 ಎನ್‌ಸಿಇ 2003 ದಿನಾಂಕ: 12.2.2004.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/ಅಣಿಯೂರು/2004/903 ದಿನಾಂಕ: 13.5.2005.

**ಪ್ರಸ್ತಾವನೆ:**

ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮೆಸರ್ಸ್ ಪ್ರಸನ್ನ ಪವರ್ ಲಿಮಿಟೆಡ್ ಕಂಪೆನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಅಣಿಯೂರು ಗ್ರಾಮದ ಅಣಿಯೂರು ಹೊಳೆಗೆ ಅಡ್ಡಲಾಗಿ 3 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಸದರಿ ಕಂಪೆನಿಗೆ ಹಂಚಿಕೆಯಾಗಿರುವ 3 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4.5 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಓದಲಾದ (3)ರ ಸರ್ಕಾರಿ ಆದೇಶದಲ್ಲಿ ಸಾಮರ್ಥ್ಯವನ್ನು 4.5 ಮೆಗಾ ವ್ಯಾಟ್‌ನಿಂದ 6 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 28.5.2005ರ ತನಕ ವಿಸ್ತರಿಸಲಾಗಿತ್ತು.

ಓದಲಾದ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಪ್ರಸನ್ನ ಪವರ್ ಲಿಮಿಟೆಡ್ ಕಂಪೆನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಅಣಿಯೂರು ಗ್ರಾಮದ ಅಣಿಯೂರು ಹೊಳೆಗೆ ಅಡ್ಡಲಾಗಿ ಹಂಚಿಕೆ ಮಾಡಲಾಗಿರುವ 6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಮುಂದಿನ 2 ವರ್ಷಗಳ ಅವಧಿಗೆ ವಿಸ್ತರಿಸಬೇಕೆಂದು ಶಿಫಾರಸ್ಸು ಮಾಡಿರುವುದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 143 ಎನ್‌ಸಿಇ 2005, ಬೆಂಗಳೂರು, ದಿನಾಂಕ: 13ನೇ ಜೂನ್ 2005**

ಮೆಸರ್ಸ್ ಪ್ರಸನ್ನ ಪವರ್ ಲಿಮಿಟೆಡ್ ಕಂಪೆನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಅಣಿಯೂರು ಗ್ರಾಮದ ಅಣಿಯೂರು ಹೊಳೆಗೆ ಅಡ್ಡಲಾಗಿ 6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ: 29.5.2005ರಿಂದ ಮುಂದಿನ 2 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ.

ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 851 **ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.